



Photo by N. Ramakrishna

ಸ್ನಾನ ಮಾಡುವುದು ಹೇಗೆ?



## ಈ ಸಂಚಿಕೆಯಲ್ಲಿ



ಇವಲ್ಲದೆ ಒಗಟು, ನಗೆ ಹನಿ, ಚುಟಕ, ಇತ್ಯಾದಿ ವಿಷಯಗಳು ಹಲವಾರು.

ಮಿತ್ರಾಂಜನ

MITRANJANAM

REGD.

MITRA PHARMACY TENALI

ಮಿತ್ರ ಫಾರ್ಮಸಿ -ತೆನಾಲಿ

ಸೋಲಾರ್ ಪೆನ್ಸ್

ಶಾಸ್ತ್ರಿ ಪೆನ್ ವರ್ಕ್ಸ★ ತೆನಾಲಿ

ಹೊಸ ಆದರ್ಶ]  ೧೨೦೦ ಪುಟಗಳ ಒಂದೇ ಒಂದು ಹೊತ್ತಿಗೆ  [ಹೊಸ ಮಾದರಿ

# ಹಿಂದೀ-ಹಿಂದೀ-ಕನ್ನಡ ರತ್ನಕೋಷ

# हिन्दी-हिन्दी-कन्नड़ रत्न कोष

ಸಂಪಾದಕ: —ಶ್ರೀ ಜೆ. ಡಿ. ಮೈಸಾಳೆ ರಾಷ್ಟ್ರಭಾಷಾ ಕೋವಿದ, ಶಿಕ್ಷಕ ಸನದ

೧೨೦೦ ಪುಟಗಳು—೩೫೦೦೦ ಶಬ್ದ ಸಂಗ್ರಹ—೩ ಲಕ್ಷ ಹಿಂದೀ ಹಾಗೂ ಕನ್ನಡ ಅರ್ಥ ವಿವರಣೆಗಳು—ಪಡೆನುಡಿಗಳು—ಗಾದೆಯ ಮಾತುಗಳು—ರಾಜಕೀಯ, ನ್ಯಾಯ ವಿಧಾಯಕೆ, ತಾರ, ರೇಡಿಯೋ ಹಾಗೂ ಭಾರತ ಶಾಸನ ಶಬ್ದಾವಳೀ ಅಲ್ಲದೆ ವಿದ್ಯಾರ್ಥಿಗಳಿಗೆ, ಅಧ್ಯಾಪಕರಿಗೆ, ಲೇಖಕರಿಗೆ, ಸಂಪಾಧಕರಿಗೆ ಉಪಯುಕ್ತವಾದ ಅನೇಕಾನೇಕ ನೂತನ ವಿಷಯಗಳ ಶಬ್ದ ಸಂಗ್ರಹವನ್ನು ಕೊನೆಯಲ್ಲಿ ಸೇರಿಸಲಾಗಿದೆ.

ಪ್ರತಿಯೊಂದು ಹಿಂದೀ ಶಬ್ದದ ಕೇವಲ ಕನ್ನಡ ಅರ್ಥವಲ್ಲದೇ ಹಿಂದೀ ಅರ್ಥವನ್ನೂ ಜೋಡಿಸಿರುವುದೇ ಈ "ರತ್ನಕೋಷ"ದ ಹೆಚ್ಚಿನ ಆದರ್ಶ! ಎರಡೂ ಭಾಷೆಗಳ ಶಬ್ದ ಸಂಪತ್ತಿಯನ್ನು ಬೆಳೆಸಲು ಇದೊಂದೇ ತಕ್ಕ ಸಾಧನ !! ಪ್ರತಿಯೊಬ್ಬ ಹಿಂದೀ ಪ್ರೇಮಿಯು ಅತ್ಯವಶ್ಯವಾಗಿ ಸಂಗ್ರಹಿಸಲೇಬೇಕಾದ ಪುಸ್ತಕ.

**ದೀಪಾವಳಿ ಶುಭ ಮುಹೂರ್ತದಲ್ಲಿ ಪ್ರಕಟವಾಗುವದು !**

ಬೆಲೆ ರೂ. ೮-೧೨-೦ :: ಅಂಚೆ ವೆಚ್ಚ ಬೇರೆ.

ಪ್ರಕಾಶಕರು:—ರಾಮಾಶ್ರಯ ಬುಕ್ ಡಿಪೊ, ಧಾರವಾಡ.

## ಚಂದಮಾಮ

ವಾರ್ಷಿಕ ಚಂದಾ

ರೂ. ೪ - ೮ - ೦

ಎರಡು ವರ್ಷ ಚಂದಾ

ರೂ. ೮ - ೦ - ೦

★

**CHANDAMAMA OFFICE**

P. B. 1686, MADRAS—1

## ಚಂದಾದಾರರಿಗೆ ಸೂಚನೆಗಳು

★ ಚಂದಮಾಮಾ ಮಾಸಪತ್ರಿಕೆಯು ಪ್ರತಿ ತಿಂಗಳ ಮೊದಲನೆಯದಿನ ಪ್ರಕಟವಾಗುವುದು. ಒಡನೆಯೇ ಚಂದಾದಾರರಿಗೆ ಪೋಸ್ಟು ಮುಖಾಂತರ ಕಳಿಸಲಾಗುವುದು. ಯಾರಿಗಾದರೂಪ್ರತಿಯು ಸಕಾಲದಲ್ಲಿ, ಹೆಚ್ಚೆಂದರೆ 7 ನೇ ತಾರೀಖಿನೊಳಗೆ ತಲಪದಿದ್ದಲ್ಲಿ ಕೂಡಲೇ ಸಂಬಂಧಪಟ್ಟ ಸ್ಥಳೀಯ ಪೋಸ್ಟ್ ಆಫೀಸಿನಲ್ಲಿ ವಿಚಾರಿಸಿ ಆಮೇಲೆ ನಮಗೆ ತಡಮಾಡದೆ ತಿಳಿಸಬೇಕು.

★ ಅಂತಹ ದೂರು ನಮ್ಮ ಕೈಗೆ ಆಯಾತಿಂಗಳ 10 ನೇ ತಾರೀಖಿನೊಳಗೆ ತಲಪಬೇಕು. ತಡವಾಗಿ ಬಂದ ಪತ್ರಗಳನ್ನು ಗಮನಿಸಲಾಗುವುದಿಲ್ಲ.

★ ಚಂದಾದಾರರು ಬರೆಯುವ ಯಾವ ಪತ್ರದಲ್ಲೇ ಆಗಲೀ ತಮ್ಮ ಚಂದಾ ಸಂಖ್ಯೆಯನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ಇದು ಬಹಳ ಮುಖ್ಯ. ತಮ್ಮ ಚಂದಾ ಸಂಖ್ಯೆ ನಮೂದಿಸದೆ ಬರೆಯುವ ಚಂದಾದಾರರ ಪತ್ರಗಳನ್ನು ಗಮನಿಸುವುದು ಸಾಧ್ಯವಿಲ್ಲ.

★ ಅಂತಹ ಚಂದಾ ಸಂಖ್ಯೆ ಪ್ರತಿಚಂದಾದಾರರಿಗೂ ಅವರ ಚಂದಾ ಹಣ ಸಂದಬಗ್ಗೆ ಬರೆದ ಕಾರ್ಡಿನಲ್ಲೂ, ಅವರಿಗೆ ಪ್ರತಿಸಲ ಕಳಿಸುವ ಚಂದಮಾಮದ ಸುತ್ತು ಕಾಗದದ ಮೇಲೂ ಬರೆಯಲ್ಪಟ್ಟಿರುತ್ತೆ.

★ ನಾವು ಪ್ರತಿಯನ್ನು ಅಂಚೆಮೂಲಕ ಕಳಿಸಿದಮೇಲೆ ಅವು ಚಂದಾದಾರರನ್ನು ಸೇರದಿದ್ದರೆ ಅದಕ್ಕೆ ನಾವು ಜವಾಬ್ದಾರರಲ್ಲ. ಆದರೆ ಚಂದಾದಾರರು ಅವಶ್ಯವಿದ್ದಷ್ಟು ಹೆಚ್ಚು ಹಣ ಕೊಟ್ಟು ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್‌ನಲ್ಲಿಯಾಗಲೀ ರಿಜಿಸ್ಟರ್ಡ್ ಪೋಸ್ಟಿನಲ್ಲಾಗಲಿ ಪ್ರತಿ ತರಿಸಿಕೊಳ್ಳಬಹುದು.

**CHANDAMAMA**

# ಮುಖಚಿತ್ರ

ಕಂಸನ ವಧೆಯಾಯಿತು. ಸೆರೆಮನೆಯಲ್ಲಿದ್ದ ವಸುದೇವದೇವಕಿ, ಮತ್ತು ಕಂಸನ ತಂದೆಯಾದ ವೃದ್ಧ ಉಗ್ರಸೇನ, ಮತ್ತು ಇನ್ನೂ ಅನೇಕ ರಾಜರ, ಸತ್ಪುರುಷರೆಲ್ಲರ ಬಿಡುಗಡೆಯಾಯಿತು. ನಂತರ ಕೃಷ್ಣನು ಉಗ್ರಸೇನನಿಗೆ ಮತ್ತೆ ರಾಜ್ಯಾಭಿಷೇಕಮಾಡಿ, ಕಂಸನ ಭಯದಿಂದ ದೇಶ ಬಿಟ್ಟು ಪರದೇಶಗಳಿಗೆ ತಲೆಮರೆಸಿಕೊಂಡು ಹೋಗಿದ್ದ ಸ್ವಜನರನ್ನೂ ಸತ್ಪುರುಷರನ್ನೂ ಮತ್ತೆ ಬರಮಾಡಿಕೊಂಡು ಸತ್ಕರಿಸಿ ಬೇಕಾದ ಅನುಕೂಲಗಳನ್ನೆಲ್ಲಾ ಏರ್ಪಡಿಸಿಕೊಟ್ಟನು. ಕಂಸನ ಕೈಯ್ಯಲ್ಲಿ ಯಮಯಾತನೆ ಪಟ್ಟ ಯಾದವರೆಲ್ಲರೂ ಕೃಷ್ಣನ ಕೆಲಸದಿಂದ ಸಂತುಷ್ಟರಾಗಿ ಸುಖದಿಂದಿರುತ್ತಿದ್ದರು. ಕೃಷ್ಣನು ತನ್ನನ್ನು ಚಿಕ್ಕಂದಿನಿಂದ ತಂದೆ ತಾಯಿಗಳಿಂತಲೂ ಹೆಚ್ಚಾಗಿ ಪ್ರೀತಿಯಿಂದ ಪಾಲಿಸಿ ಪೋಷಿಸಿದ ನಂದಯಶೋದೆಯರನ್ನು ಸಕಲ ವಸ್ತ್ರಾಭರಣ ಕಾಣಿಕೆಗಳಿಂದ ಸನ್ಮಾನಿಸಿ ಗೋಕುಲಕ್ಕೆ ಬೀಳ್ಕೊಟ್ಟನು. ಕೃಷ್ಣನನ್ನು ಬಿಟ್ಟು ಹೋಗುವಾಗ ಹೋಗಲಾರದೇ ದುಃಖಪಡುತ್ತಿದ್ದ ನಂದಯಶೋದೆಯರಿಗೆ ಮತ್ತೆ ಬರುವೆನೆಂದು ಸಮಾಧಾನಪಡಿಸಿ ಕಳುಹಿಸಿದನು.

ತರುವಾಯ ವಸುದೇವನು ತನ್ನ ಮುದ್ದಿನ ಮಕ್ಕಳಾದ ಕೃಷ್ಣಬಲರಾಮರಿಬ್ಬರಿಗೂ ಗರ್ಗಾಚಾರ್ಯರಮೂಲಕ ಶಾಸ್ತ್ರೋಕ್ತವಿಧಿಯಿಂದ ಉಪನಯನ ಸಂಸ್ಕಾರಾದಿಗಳನ್ನು ನಡೆಸಿದನು. ಇನ್ನು ವಿದ್ಯಾಭ್ಯಾಸಕ್ಕಾಗಿ ಅವಂತೀಪುರದಲ್ಲಿ ಸಕಲ ವಿದ್ಯಾಪಾರಂಗತನಾದ ಸಾಂದೀಪನೆಂಬ ಬ್ರಾಹ್ಮಣೋತ್ತಮನಲ್ಲಿಗೆ ಇಬ್ಬರನ್ನೂ ಕಳುಹಿಸಲಾಯಿತು.

ಕೃಷ್ಣಬಲರಾಮರು ಸ್ವತಃ ಸರ್ವಜ್ಞರಾದರೂ ವಿದ್ಯಾಭ್ಯಾಸದ ಅಗತ್ಯವಿಲ್ಲದಿದ್ದರೂ ಮಾನವರಾಗಿ ಹುಟ್ಟಿ ಲೋಕಕ್ಕೆ ಉತ್ತಮ ಆದರ್ಶ ತೋರುವ ನೆಪದಿಂದ ಗುರುಕುಲವಾಸವನ್ನು ಮಾಡಲು ಸಿದ್ಧರಾದರು.

ಇಬ್ಬರು ಬಾಲಕರೂ ಅವಂತಿಪುರಕ್ಕೆ ಹೋಗಿ ಸಾಂದೀಪನೆಂಬ ಗುರುವನ್ನಾಶ್ರಯಿಸಿ ಅಲ್ಲಿಯೇ ವಾಸಿಸುತ್ತಾ ಗುರು ಸೇವೆ ಶುಶ್ರೂಷೆಗಳನ್ನು ಅತ್ಯಂತ ವಿಧೇಯರಾಗಿ ನಡೆಸುತ್ತಿದ್ದರು. ಇವರ ಸೇವೆಯಿಂದ ಪ್ರಸನ್ನಚಿತ್ತನಾಗಿ ಸಾಂದೀಪನು 64 ವಿದ್ಯೆಗಳನ್ನೂ, ವೇದೋಪನಿಷತ್ತುಗಳನ್ನೂ, ಮಂತ್ರ ರಹಸ್ಯ, ಧನುರ್ವೇದ, ನ್ಯಾಯಧರ್ಮಾದಿ ಶಾಸ್ತ್ರಗಳನ್ನೂ ರಾಜನೀತಿಗಳನ್ನೂ ಒಂದನ್ನೂ ಬಿಡದೆ ಹೇಳಿಕೊಟ್ಟನು. ಎಲ್ಲವನ್ನೂ ಈ ಬಾಲಕರು ಒಂದು ಸಲ ಹೇಳಿದೊಡನೆ ಗ್ರಹಿಸುತ್ತಾ ಕೆಲವೇ ದಿನಗಳಲ್ಲಿ ಸರ್ವಶಾಸ್ತ್ರಸಂಪನ್ನರೂ ಸಕಲವಿದ್ಯಾಪಾರಂಗತರೂ ಆಗಿ ಗರ್ವ ದುರಭಿಮಾನಗಳಿಲ್ಲದೆ ತೇಜಸ್ವಿಗಳಾಗಿ ಬೆಳಗುತ್ತಿದ್ದರು.

ಇಂತಹ ಮೇಧಾವಿಗಳಾದ ಶಿಷ್ಯರಿಗೆ ವಿದ್ಯೆ ಹೇಳಿದುದರಿಂದ ತನ್ನ ಶ್ರಮವೂ ಸಾರ್ಥಕವಾಯಿತೆಂದು ಸಾಂದೀಪನೂ ಸಂತೋಷಪಡುತ್ತಿದ್ದನು.

ಸಂಪುಟ ೬
ಸಂಚಿಕೆ ೧

ಜನವರಿ
೧೯೫೧

# ಚಂದಮಾಮ

## ದನ ★ ★

—ಶ್ರೀ. ತಿರುಮಲೇಶ್ವರ.

ದನವ ನೋಯಿಸ ಬೇಡ, ಓ ಮುದ್ದು ಮಗುವೆ!
ದನವ ನೋವಿಸಿ ನೋಡೆ, ಸಂತೋಷ ಪಡುವೆ
ದನವೆ ನೀ ಕುಡಿವ ಹಾಲನು ಕೊಡುಗು ನೋಡು
ದನಕೆ ನೀ ಮೇವಿತ್ತು, ದಿನವು ಕಾಪಾಡು
ದನವೆ 'ಧನಲಕ್ಷ್ಮಿ' ತಾ ಮನೆಯ ಬೆಳಗಿಸುವ
ದನವೆ 'ಮಾತೆ' ಯು ಮಕ್ಕಳನ್ನು ಬಳೆಯಿಸುವ
ದನವುಳ್ಳವನ ಮನೆಗೆ ಸಿರಿ ತಾನೆ ಬಕ್ಕು
ದನವೆ ಪೂಜೆಯಗೊಂಬ 'ದೇವಿ' ಯೆನಲಕ್ಕು
ದನವ ಸಾಕಲು ಪಡೆವೆ ಸಕಲ ಸಂಪದವ
ದನವ ಪೂಜಿಸೆ ಕಳೆವೆ ನಿಖಿಳ ಪಾತಕವ
ದನವ ಪೂಜಿಸಿ 'ದಿಲೀಪ' ನು ಪಡೆದ ಮಗನ
ದನವ ಪೀಡಿಸಿದ 'ಹೈಹಯ' ಸೇರ್ದ ಯಮನ
ದನಗಳೊಳು ತೋರು ನೀ ನಿರತ ಕಾರುಣ್ಯ
ದನದ ಸೇವೆಯ ಮಾಡಿ ಗಳಿಸೆಲವೊ ಪುಣ್ಯ
ದನ ಕರುಗಳನು ಕರೆಯಲುಣಬಹುದು ಚಿಣ್ಣಾ !
ದನಕರುಗಳಿಲ್ಲದಿಹ ಮನೆ ನರಕವಣ್ಣಾ
ದನಗಳಿಗೆ ಪ್ರೀತಿಯಿಂ ತಿಂಡಿ ತಿನಸುಗಳ
ಅನುದಿನವು ಕೊಡುತೆ ನೀ ಸಲಹೆಲವೊ ತರಳ!





# ಸರದಾರ ಪಟೇಲರ ನಿಧನ.

ಕಳೆದತಿಂಗಳು 15ನೇ ತಾರೀಖಿನ ದಿನ ಇಡೀ ಭರತಖಂಡದ ಸಮಸ್ತ ಹಿರಿಯರೂ ಕಿರಿಯರೂ ಅತ್ಯಂತ ಶೋಕದಿಂದ ಕಣ್ಣೀರು ಹಾಕಿದ ದಿನ. ಜನತೆಯ ಪ್ರೀತಿ ವಿಶ್ವಾಸ ಗಳಿಸಿ, ಭಾರತದ 35 ಕೋಟಿ ಜನಕ್ಕೆ ಚಿಕ್ಕಪ್ಪನವರಂತಿದ್ದ ಶ್ರೀ ಸರದಾರ ವಲ್ಲಭಭಾಯಿ ಪಟೇಲರು ದಿವಂಗತರಾದ ದಿನ. ಗುಜರಾಥದ ಸಿಂಹ, ಭಾರತದ ಬಿಸ್ಮಾರ್ಕ್, ಉಕ್ಕಿನ ಮನುಷ್ಯ ಮುಂತಾದ ಹೆಸರುಗಳಿಂದ ಖ್ಯಾತಿಗಳಿಸಿದ ವೀರಾಗ್ರಗಣ್ಯರು ನಮ್ಮ ಸರದಾರ ಪಟೇಲರು. ರಾಷ್ಟ್ರದಹಿತಕ್ಕಾಗಿ ಜೀವ ಮುಡುಪಿಟ್ಟು, ಕಳೆದ 35 ಸಂವತ್ಸರಗಳಿಂದ ನಿಸ್ವಾರ್ಥ ಸೇವೆಸಲ್ಲಿಸಿದ ಪವಿತ್ರಾತ್ಮ, ಸರದಾರರು. ಸ್ವಾತಂತ್ರ್ಯ ಸಮರದಲ್ಲಿ ಬಾಪೂಜಿಗೆ ಬಲಗೈಯಂತಿದ್ದು ನಮ್ಮನ್ನೆಲ್ಲಾ ದಾಸ್ಯದಿಂದ ಮುಕ್ತಮಾಡಿದ ಮಹಾವ್ಯಕ್ತಿ, ಸರದಾರರು. ಸ್ವಾತಂತ್ರ್ಯಗಳಿಸಿದ ನಂತರ ಭಾರತದ ಉಪಪ್ರಧಾನ ಮಂತ್ರಿಗಳಾಗಿದ್ದು, 600ಕ್ಕೆ ಮೇಲ್ಪಟ್ಟು ಚೂರಾಗಿ ಹರಿದು ಹಂಚಿದ್ದ ಸಂಸ್ಥಾನಗಳನ್ನೆಲ್ಲಾ ಒಟ್ಟುಗೂಡಿ ಒಮ್ಮುಖಮಾಡಿ ಸಶಕ್ತಏಕೈಕ ಭಾರತವನ್ನಾಗಿ ಮಾಡಿದಕೀರ್ತಿ ಸರದಾರರಿಗೆ ಸಲ್ಲತಕ್ಕದು. ಹಿಂದೆ ಸಮ್ರಾಟ ಅಶೋಕ, ಚಂದ್ರಗುಪ್ತಾದಿಗಳೂ, ಮೊಗಲ ಚಕ್ರವರ್ತಿಗಳೂ ತಮ್ಮ ಶಕ್ತಿಯಿಂದ ಸಾಧಿಸಲು ಆಗದೇಹೋದ ಕೆಲಸವನ್ನು ಇಂದು ಕೆಲವೇ ಕಾಲದಲ್ಲಿ ಅಪ್ರತಿಮ ಚಾತುರ್ಯದಿಂದ ಸಾಧಿಸಿದ ಮಹಾ ಮೇಧಾವಿಗಳು, ಸರದಾರರು. ಭಾರತದ ಇತಿಹಾಸದಲ್ಲಿ ಸ್ವರ್ಣಾಕ್ಷರಗಳಿಂದ ಕೆತ್ತಿಡಲ್ಪಡತಕ್ಕಂಥ ಕೀರ್ತಿವೆತ್ತ ಹೆಸರು ಸರದಾರರದು. ಗುಜರಾಥದ ಸಾಮಾನ್ಯ ರೈತ ಕುಟುಂಬದಲ್ಲಿ ಹುಟ್ಟಿ ವಕೀಲಿ ವೃತ್ತಿಯಲ್ಲಿದ್ದು, ದೇಶದ ಹೀನಸ್ಥಿತಿಗೆ ಮರುಗಿ, ನಾಯಕರಾಗಿ ಹಿರಿಯಸ್ಥಾನಕ್ಕೇರಿದ ಅಸಾಮಾನ್ಯಮೂರ್ತಿ. ದಾಸ್ಯ ಜೀವನದಲ್ಲಿ ಕಂದಿ ಕುಂದಿ ಕುರಿಗಳಂತಾಗಿದ್ದ ಜನತೆಗೆ ಧೈರ್ಯ ಸಾಮರ್ಥ್ಯವೆಂದರೇನೆಂದು ತೋರಿಸಿ ಹುರುಪು ಹುಟ್ಟಿಸಿ ಕ್ರಾಂತಿಗೆ ಕಾರಣರಾದ ಗಂಡುಗಲಿ, ಸರದಾರರು.

ಇತಿಹಾಸ ಪ್ರಸಿದ್ಧ ಬರ್ಡೋಲಿ ಸತ್ಯಾಗ್ರಹದ ನಾಯಕತ್ವವಹಿಸಿ ಜಯಗಳಿಸಿ ಬ್ರಿಟಿಷ ಸಾಮ್ರಾಜ್ಯದ ಬುಡವಲ್ಲಾಡಿಸಿದಾಗ ಇವರ ಸಂಘಟನ ಶಕ್ತಿಗೆ ತಲೆದೂಗಿ ಮಹಾತ್ಮರು ಪ್ರೀತಿಯಿಂದ 'ಸರದಾರ್' ಎಂಬ ಹೆಸರು ಕೊಟ್ಟರು. ಅಂದಿನಿಂದ ವಲ್ಲಭಭಾಯಿ ಪಟೇಲರು ಸರದಾರ ಪಟೇಲರಾದರು. ಅವರ ಧೀರ ಗಂಭೀರ ಭಾಷಣಗಳು ಜನತೆಗೆ ಪ್ರೀತಿ ಉತ್ಸಾಹ ಕಾರಕವೂ ಶತ್ರುಗಳ ಹೃದಯ ಭೇದಕವೂ ಇರುತ್ತಿದ್ದುವು. ಇಂತಹ ಮಹಾವ್ಯಕ್ತಿಯ ನಿಧನದಿಂದ ದೇಶಕ್ಕೆ ಉಂಟಾದ ದುಃಖ ಆಘಾತಗಳು ಅಲ್ಪವಲ್ಲ. ದೇಶಕ್ಕೆ ಈಗ ಸರದಾರರಂತಹ ವ್ಯಕ್ತಿಗಳು ಇನ್ನೂ ಬೇಕು. ಅಂತಹ ನಿಸ್ವಾರ್ಥ ಸಮರ್ಥರು ತುಂಬಬೇಕು. ಆಗಲೇ ಮತ್ತೊಮ್ಮೆ ಭಾರತವು ಪ್ರಪಂಚದಲ್ಲಿ ತಲೆಯೆತ್ತಿ ಮುನ್ನಡೆದೀತು. ಮಕ್ಕಳೇ, ಸರದಾರರು ಚಿಕ್ಕಂದಿನಲ್ಲಿ ನಿಮ್ಮಂತೆಯೇ ಬಾಲಕರಾಗಿದ್ದರು. ನೀವುಗಳೂ ದೃಢಸಂಕಲ್ಪದಿಂದ ಅವರಂತೆ ಕೀರ್ತಿವಂತರಾಗಬಲ್ಲಿರಿ. ಅವರಂತೆ ಆಗಲು ನೀವೆಲ್ಲರೂ ಪ್ರಯತ್ನಪಡಬೇಕು. ಆಗಲೇ ದೇಶಕ್ಕೆ ಉನ್ನತಿ. ಸರದಾರ ಪಟೇಲರಂತಹ ವ್ಯಕ್ತಿಗಳು ಭಾರತಕ್ಕೆ ನೂರಾರು ಜನ ಬೇಕೆಂಬುದನ್ನು ನೆನಪಿಡಿ.

ಇತಿ ಅಣ್ಣ.

ಜೈ ಹಿಂದ್ ! ಎಂ. ಟಿ. ವಿ. ಆಚಾರ್ಯ.

# ಮಂಗಪ್ಪನ ಕಥೆ

ಮರಿ ಮಂಗಪ್ಪಾಜಿ ಆಗ ಇನ್ನೂ ಪುಟ್ಟದಿತ್ತು. ಅದಕ್ಕೆ ಒಂದು ದಿನ ಬಾಯಾರಿಕೆ ಆಯಿತು. ತಾಯಿಗೆ ಹೇಳದೆ ಒಂದು ಕೊಳದ ಬಳಿ ಹೋಗಿ ನೀರು ಕುಡಿಯುತ್ತಿರುವಾಗ ಅದರ ಪ್ರತಿಬಿಂಬ ನೀರಿನಲ್ಲಿ ಕಾಣಿಸಿತು. 'ಅಯ್ಯೋ, ನಾನೆಂತಹ ಕುರೂಪಿ' ಎಂದು ಎನ್ನಿಸಿತು ಆ ಮರಿಗೆ. ಏನು ಮಾಡಿದರೆ ಸುಂದರನಾಗುವೆ ಎಂದು ಯೋಚಿಸುತ್ತಾ ಮುಂದೆ ಹೋಗುತ್ತಿರುವಾಗ ಒಂದು ಆನೆ ಎದುರಿಗೆ ಸಿಕ್ಕಿತು. ಅದರ ಆಕಾರವನ್ನೂ ಸೊಂಡಿಲನ್ನೂ ನೋಡಿ 'ಆಹಾ, ನನಗೂ ಅಂತಹ ಸೊಂಡಿಲಿದ್ದಿದ್ದರೆ ಎಷ್ಟೋ ಚೆನ್ನಾಗಿತ್ತು' ಎಂದು ಮರುಗುತ್ತಾ ಮುಂದೆ ನಡೆಯಿತು. ಆಗ ಒಂದು ಜಿಂಕೆ ಸಿಕ್ಕಿತು. ಅದರ ಅಂದವನ್ನು ನೋಡಿ 'ಆಹಾ, ಇದರ ಕೊಂಬು ಎಷ್ಟು ಅಂದವಾಗಿದೆ? ಅಂಥದು ನನಗೂ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿದ್ದೆನೋ!' ಎಂದು ಯೋಚಿಸುತ್ತಾ ಒಂದು ದೊಡ್ಡ ಮರವನ್ನೇರಿ ಸಾಯಂಕಾಲದವರೆಗೆ ಅಳುತ್ತಾ ಕುಳಿತಿತ್ತು. ಆ ಮರದಲ್ಲಿ ವಾಸವಾಗಿದ್ದ ಒಂದು ಮುದಿಗೂಬೆಯು ಮರಿಮಂಗಪ್ಪನ ದುಃಖ ನೋಡಿ "ಏನು ಮಂಗಣ್ಣಾ, ಯಾಕೆ ಅಳುವೆ? ಅಮ್ಮ ಹೊಡೆದಳೆ? ಏನು ಸಮಾಚಾರ" ಎಂದು ಕೇಳಿತು. ಮಂಗಪ್ಪಾಜಿ ಕಣ್ಣ ಲರಿಸಿನೋಡಿತು. "ಆಹಾ, ಈ ಗೂಬೆಯ ರೆಕ್ಕೆಯಂತಹ ರೆಕ್ಕೆ ನನಗಿಲ್ಲವಲ್ಲಾ?" ಎಂದು ಹೇಳಿ ಬಿಕ್ಕಿ ಬಿಕ್ಕಿ ಅತ್ತಿತು. ಗೂಬೆ ಅದನ್ನು ಕೇಳಿ ಕನಿಕರಪಟ್ಟು 'ಮಂಗಣ್ಣಾ, ಚಿಂತಿಸಬೇಡ. ಒಂದು ಉಪಾಯ ಹೇಳಿಕೊಡುವೆ. ಅದರಂತೆ ಮಾಡಿದರೆ ನಿನಗೂ ನನ್ನಂತಹ ರೆಕ್ಕೆಸಿಕ್ಕುತ್ತೆ' ಎಂದಿತು. "ಅದೇನು ಬೇಗಹೇಳು" ಎಂದು ಮಂಗಪ್ಪ ಆತುರದಿಂದ ಕೇಳಿತು. "ನೋಡು, ಮೊದಲು ಹೋಗಿ ಕೆಸರು ಗುಂಡಿಯಲ್ಲಿ ಬಿದ್ದು ಒದ್ದಾಡು. ನಂತರ ನನ್ನಲ್ಲಿಗೆ ಬಾ" ಎಂದಿತು ಗೂಬೆ.

ಮಂಗಪ್ಪಾಜಿ ಸಂತೋಷದಿಂದ ಓಡಿಹೋಗಿ ಕೆಸರು ಮಣ್ಣನ್ನೆಲ್ಲಾ ಮೈಗೆ ಅಂಟಿಸಿಕೊಂಡು ಕುಣಿಯುತ್ತಾ ಓಡಿಬಂದಿತು. ಗೂಬೆಯು ತನ್ನ ಗೂಡಿನಲ್ಲಿ ಉದುರಿಸಿದ್ದ ತನ್ನ ಹಳೆಯ ಗರಿ ಪುಕ್ಕಗಳನ್ನೆಲ್ಲಾ ಮಂಗಪ್ಪನ ಒದ್ದೆ ಮೈಗೆ ಅಂಟಿಸಿತು. ಮಂಗಪ್ಪ ಆಗ ತನ್ನ ವಿಚಿತ್ರ ರೂಪವನ್ನು ನೋಡಿ ನೋಡಿ ಆನಂದಪಡುತ್ತಾ ತನ್ನಮನೆಗೆ ಹೊರಟಿತು. ಆಗ ರಾತ್ರಿಯಾಗಿತ್ತು. ಹಸಿವೂ ಆಗುತಿತ್ತು. ತಾಯಿಮನೆಗೆ ಹೋಗಿ ಬಾಗಿಲು ತಟ್ಟಿತು. ಅದರ ತಾಯಿಯು ಬಾಗಿಲು ತೆಗೆದು ಇವರ ವಿಕಾರ ರೂಪವನ್ನೂ ವೇಷವನ್ನೂ ನೋಡಿ ಇದು ತನ್ನ ಮರಿಯಲ್ಲ ಎಂದುಕೊಂಡು "ಹೋಗು ಇಲ್ಲಿ ನಿನಗೆ ಜಾಗವಿಲ್ಲ. ಇದುನಿನ್ನಮನೆಯಲ್ಲ ನಡಿ" ಎಂದು ಗದರಿಸಿ ಬಾಗಿಲು ಮುಚ್ಚಿಕೊಂಡಿತು. ಪಾಪ! ಮರಿ ಮಂಗಪ್ಪಾಜಿಗೆ ತಡೆಯಲಾರದಷ್ಟು ದುಃಖವಾಯಿತು. ಹಸಿವುಬೇರೆ. ತಾಯಿಬೇರೆ ಹೊರಕ್ಕಟ್ಟಿದಳು. ಅಳುತ್ತಾ 'ಅಯ್ಯೋ, ನಾನು ಅವರಿವರ ಮಾತು ಕೇಳಿ ವೇಷ ಬದಲಾಯಿಸಿದುದರಿಂದಲ್ಲವೆ ಈರೀತಿ ಕಷ್ಟ ಬಂದಿತು? ನಾನು ಇದ್ದ ಹಾಗೇ ಇದ್ದಿದ್ದರೆ ಎಷ್ಟೋ ಉತ್ತಮವಿತ್ತು. ಈಗ ಬುದ್ಧಿ ಬಂತು' ಎಂದು ಕೊಂಡಿತು. ಹೇಗೋ ಆ ರಾತ್ರಿಕಳೆದು ಬೆಳಗಿನ ಜಾವ ಎದ್ದು ಕೊಳದಲ್ಲಿ ಹೋಗಿ ಮೈತೊಳೆದು ಶುಚಿಯಾಗಿ ತಾಯಿಮನೆಗೆ ಬಂದು ಬಾಗಿಲು ತಟ್ಟಿತು. ತಾಯಿಯು ಬಾಗಿಲು ತೆಗೆದು 'ಬಾ, ಕಂದ ಬಾ. ರಾತ್ರಿ ಎಲ್ಲಿಹೋಗಿದ್ದೆ? ಯಾಕೆ ಬರಲಿಲ್ಲ' ಎಂದು ಸಂತೋಷದಿಂದ ಮುದ್ದಾಡುತ್ತಾ ಕೇಳಿತು. ಮರಿ ಮಂಗಪ್ಪಾಜಿಯು ನಾಚಿಕೆಯಿಂದ ನಡೆದ ಸಂಗತಿ ಹೇಳಿ ಇನ್ನುಮುಂದೆ ಆರೀತಿ ಮಾಡುವುದಿಲ್ಲವೆಂದು ನಿರ್ಧರಿಸಿ ತಾಯಿಯೊಂದಿಗೆ ಆನಂದದಿಂದಿರುತ್ತಿತ್ತು.

ಒಬ್ಬರು ಹೇಳಿದ ಕೆಲಸ ಯೋಚಿಸಿ ಮಾಡಬೇಕು.

ಎಸ್. ಎಸ್. ಪ್ರಸನ್ನ.

# ವಿದ್ಯುತ್ತು

ಧಬ ಧಬ ಧಬ ಸುರಿಯುತ್ತಿದೆ
ಜಲಪಾತದ ನೀರು
ಭರ ಭರ ಭರ ತಿರುಗುತ್ತಿದೆ
ಯಂತ್ರಗಳತಿ ಜೋರು

ನಿಡು ಸಾಲಿಗೆ ಕಡೆದಂತಿವೆ
ಮರಗಳು, ಕಂಬಗಳು
ಮಿರು ಮಿರು ಮಿರು ಹರಿಯುತ್ತಿವೆ
ತಾಮ್ರದ ತಂತಿಗಳು

ನೀರಿನ ಜೋರಿನ ಶಕ್ತಿಯು
ಯಂತ್ರವ ತಾ ಸೇರಿ
ತಂತಿಯ ಮೂಲಕ ಹರಿಯುತ
ಯಂತ್ರಾಲಯವನು ಸಾರಿ

ಅಲ್ಲಿಂ ಮನೆ ಮಠ ಹೊಲ
ಎಲ್ಲೆಡೆಗೂ ಹರಿದು
ಎಲ್ಲರ ಎಲ್ಲಾ ಕೆಲಸವ
ಸುಲಭವ ಮಾಡುವುದು

ಯಂತ್ರಗಳನು ತಿರುಗಿಸುವುದು
ಚಿನ್ನವನು ಅಗೆಯವುದು
ಅದುರನು ಕರಗಿಸಿ, ಮಣ್ಣನು
ಗಾಜನು ಮಾಡುವುದು

ಕಾಣದ ಅದ್ಭುತ ಶಕ್ತಿಯು
ಮಿಂಚಲಿ ಅಡಗಿತ್ತು
ಮಾನವ ಬುದ್ಧಿಗೆ ಸಿಕ್ಕುತ
ಒದಗಿತು ವಿದ್ಯುತ್ತು

ಈ ಶಕ್ತಿಯು ಮಾದೇವನ
ಶಕ್ತಿಯ ಅಣುಮಾತ್ರ
ಈ ಲೋಕವು ಪರಮಾತ್ಮನ
ಸೃಷ್ಟಿಯ ಕಣ ಮಾತ್ರ

ಇದು ತಿಳಿಯುತ ನಡೆಯುವನೇ
ಜಾಣನು–ವಿಜ್ಞಾನಿ
ತಿಳಿಯದೆ ನೋಡುತ ಹಿಗ್ಗುತ
ಬಳಸುವ (—) ಜ್ಞಾನಿ!

ಮು. ವೆಂಕಟಕೃಷ್ಣಪ್ಪ, ಶಿಡ್ಲಘಟ್ಟ.

# ಸಂಸಾರಿ ಯಾರು?

ದೇಹವನು ಅಲುಗಿಸುತ
ಒನಪು ವೈಯಾರವನು
ತೋರುವ ಸಿರಿನಾರಿ ಸಂಸಾರಿಯಲ್ಲ!

ಶಾಲೆಯಾ ಹುಡುಗರನು
ಓರೆಗಣ್ಣಲಿ ನೋಡಿ
ಜಾಲ ಬೀಸುವ ನಾರಿ ಸಂಸಾರಿಯಲ್ಲ!

ತಿಳಿಸದೇ ಗಂಡನಿಗೆ
ಸಿನಿಮ, ನಾಟಕ ನೋಡಿ
ಸರಸವಾಡುವ ನಾರಿ ಸಂಸಾರಿಯಲ್ಲ!

ಅರಿಯದಾ ಬಾಲರಿಗೆ
ಆಶೆಯನು ತೋರಿಸುತ
ಪಾಶ ಬೀಸುವ ನಾರಿ ಸಂಸಾರಿಯಲ್ಲ!

ಪತಿಯೊಡನೆ ಸೇರದೊಲು
ಪರ ಪುರುಷಗೊಲಿಯುತ್ತ
ಪತಿಯ ನಿಂದಿಪ ನಾರಿ ಸಂಸಾರಿಯಲ್ಲ.

ಪತಿಯ ಮನವನು ಅರಿತು,
ಹದನಾಗಿ ಬಾಳುತಲಿ
ಸುತರ ಪಡೆದಿಹ ನಾರಿ ಸಂಸಾರಿ ತಾನು!

[ಎಚ್. ಎಸ್. ಅನಂತ ಕೃಷ್ಣ, ಮೈಸೂರು]



# ಗೋಡೆ ಮೇಲಿನ ಹಲ್ಲಿ

**ಈ** ಸೃಷ್ಟಿಗೆ ಮೊಟ್ಟ ಮೊದಲು ಆದಿಶಕ್ತಿಯನ್ನು ಭಗವಂತ ಹುಟ್ಟಿಸಿದನಂತೆ. ಶಕ್ತಿ ಸ್ವರೂಪಿಣಿಯಾದಂತಹ ಆ ಜಗನ್ಮಾತೆ ಜನಿಸಿದಕೂಡಲೇ "ದೇವಾಧಿ ದೇವಾ, ನನ್ನನ್ನು ಹುಟ್ಟಿಸಿದೆ. ಒಳ್ಳೆಯದಾಯಿತು. ಆದರೆ ನನಗೆ ಪ್ರತಿ ಪ್ರಾಣಿಯೂ ಬಲಿಯಾಗಬೇಕಲ್ಲಾ! ನನ್ನ ಆಹಾರದ ವಿಷಯವೇನಾದರೂ ಯೋಚಿಸಿರುವೆಯಾ?" ಎಂದು ಕೇಳಿದಳಂತೆ.

ಅದಕ್ಕೆ ಭಗವಂತ "ದೇವಿ. ಅದಕ್ಕೇನು. ಪ್ರಪಂಚದಲ್ಲಿ ಲಕ್ಷಾಂತರ ಪ್ರಾಣಿಗಳಿವೆ. ಆದರೆ ಯಾವ ಪ್ರಾಣಿಯ ರಕ್ತ ಪ್ರಶಸ್ತವಾದುದೋ, ಯಾವುದು ನಿನಗೆ ರುಚಿಕರವಾಗಿರುವುದೋ ತಿಳಿದುಕೊಳ್ಳಬೇಕು. ಇದರ ಸಲುವಾಗಿ ಈಗಲೇ ಸೊಳ್ಳೆರಾಜನನ್ನು ಕಳುಹಿಸುತ್ತಿದ್ದೇನೆ" ಎಂದು ಹೇಳಿದನಂತೆ.

ದೇವರ ಆಜ್ಞೆಯ ಪ್ರಕಾರ ಸೊಳ್ಳೆ ಹೊರಟು ಪ್ರಪಂಚದಲ್ಲಿರುವ ಪ್ರತಿ ಪ್ರಾಣಿಯ ಶರೀರವನ್ನೂ ತನ್ನ ಕೊಂಡಿಯಿಂದ ಚುಚ್ಚಿ ರಕ್ತ ಹೀರಿ ಸವಿನೋಡುತಿತ್ತು. ಯಾವ ಜಂತುವಿನ ರಕ್ತ ಹೇಗಿದೆ ಎಂಬುದನ್ನು ಸ್ವತಃ ತಿಳಿದುಕೊಂಡಿತು.

ಪ್ರಪಂಚವನ್ನೆಲ್ಲಾ ಸುತ್ತಿ ತನ್ನ ಕಾರ್ಯ ಮುಗಿಸಿಕೊಂಡು ಹಿಂತಿರುಗಿ ಬರುತ್ತಿರುವಾಗ ದಾರಿಯಲ್ಲಿ ಒಂದು ಗಿಡದ ಮೇಲಿದ್ದ ಹಲ್ಲಿಯೊಂದು ಸೊಳ್ಳೆಯನ್ನು ನೋಡಿ, ಮಾತನಾಡಿಸಿತು. "ಓಹೋ, ಏನು ಸೊಳ್ಳೆ ರಾಜರೇ! ಇಂದು ಎಂತಹ ಸುದಿನ! ಮಹಾ ಸುದಿನ!! ಎಲ್ಲಿಂದ ಸವಾರಿ ಚಿತ್ತೈಸಿರುವುದು? ಬನ್ನಿ ಬನ್ನಿ. ಹೀಗೆಬಂದು ಈ ಮರದ ನೆರಳಲ್ಲಿ ಸ್ವಲ್ಪ ವಿಶ್ರಾಂತಿ ಪಡೆಯಿರಿ" ಎಂದು ತುಂಬಾ ಆದರದಿಂದ ಆಹ್ವಾನಿಸಿತು.

ಹಲ್ಲಿ ಅಷ್ಟೊಂದು ಆದರ ವಿಶ್ವಾಸಗಳಿಂದ ಕರೆಯುವುದನ್ನು ಕಂಡು "ಭೇಷ್! ತುಂಬಾ ಸೊಗುಸಾಗಿದೆ. ನಾನು ಈ ಪ್ರಪಂಚವೆಲ್ಲಾ ಪರ್ಯಟನ ಮಾಡುವ ಕಾರ್ಯದಲ್ಲಿ ಈ

ಸಿ. ಸುಗುಣಾವತಿ, ಸಿದ್ದಾಪುರ.



ಹಲ್ಲಿಯ ರಕ್ತದ ವಿಷಯವೇ ಮರೆತಿದ್ದೆ. ಅವಕಾಶ ಸಿಕ್ಕಿತಾದ್ದರಿಂದ ಈಗ ಈ ಕೆಲಸ ಸಹ ಮುಗಿಸಿಕೊಂಡು ಹೋಗಬಹುದು" ಎಂದು ಸೊಳ್ಳೆ ಸಂತೋಷ ಪಟ್ಟಿತು.

ಆ ಮಾತು ಈ ಮಾತು ಆಡುತ್ತಾ ಹಲ್ಲಿ ಕುಶಲ ಪ್ರಶ್ನೆ ಮಾಡಲು, ಸೊಳ್ಳೆ "ಹಲ್ಲಿ ಭಾವಯ್ಯ, ಹಲ್ಲಿಭಾವಯ್ಯ, ನಿಮಗಿನ್ನೂ ಗೊತ್ತಿಲ್ಲವೇ? ಶಕ್ತಿ ಸ್ವರೂಪಿಣಿಯಾದ ಜಗನ್ಮಾತೆಯನ್ನು ಭಗವಂತ ಸೃಷ್ಟಿಸಿದ್ದಾನೆ. ಆ ದೇವಿಗೆ ಆಹಾರವಾಗಿ ಯಾವ ಪ್ರಾಣಿಯ ರಕ್ತ ಯೋಗ್ಯವಾಗಿದೆಯೋ ಪರೀಕ್ಷೆ ಮಾಡಲು ನನ್ನನ್ನು ಕಳುಹಿಸಿದ್ದಾರೆ. ಆ ಕಾರ್ಯದಮೇಲೆ ಪ್ರಪಂಚ ಪರ್ಯಟನೆ ಮಾಡಿ, ಪ್ರತಿ ಪ್ರಾಣಿಯ ರಕ್ತದ ಸವಿ ನೋಡಿದ್ದೇನೆ. ನನ್ನ ಅಭಿಪ್ರಾಯ ತಿಳಿಸಲು ಭಗವಂತನ ಹತ್ತಿರ ಹಿಂದಿರುಗುತ್ತಿದ್ದೇನೆ." ಎಂದು ಹೇಳಿತು.

"ಸೊಳ್ಳೆ ರಾಜನೇ, ಇಂದು ಅತ್ಯಂತ ಮಹತ್ವದ ವಿಷಯ ಕಿವಿಗೆಹಾಕಿದೆ. ಆದರೆ ಪ್ರಪಂಚವೆಲ್ಲಾ ಸುತ್ತಿಬಂದೆಯಲ್ಲಾ ಯಾವ ಪ್ರಾಣಿರಕ್ತ ನಿನಗೆ ಹೆಚ್ಚು ರುಚಿಕರವಾಗಿತ್ತು" ಎಂದು ಕುತೂಹಲ ಭರಿತವಾಗಿ ಕೇಳಿತು ಹಲ್ಲಿ. "ಹಲ್ಲಿಭಾವ, ಎಷ್ಟೋ ಪ್ರಾಣಿಗಳನ್ನು ನೋಡಿಕೊಂಡು ಬಂದಿದ್ದೇನೆ. ಆದರೆ ಮನುಷ್ಯನ ರಕ್ತದಷ್ಟು ರುಚಿ ಮತ್ತೆ ಯಾವ ಪ್ರಾಣಿಯ ರಕ್ತದಲ್ಲೂ ಇಲ್ಲ. ಈ ವಿಷಯವನ್ನು ನಾನು ಈಗ ಹೋಗಿ ದೇವಿಗೆ ನಿವೇದಿಸುವ ಎಂದಿದ್ದೇನೆ." ಎಂದು ಹೇಳಿತು ಸೊಳ್ಳೆ.

ಈ ಮಾತು ಕೇಳಿ ತನ್ನ ಪ್ರಸ್ತಾಪ ವಿಲ್ಲದಿದ್ದುದರಿಂದ ತನ್ನ ವರ್ಗಕ್ಕೆ ಕಷ್ಟ ತಪ್ಪಿತಲ್ಲಾ ಎಂದು ಹಲ್ಲಿಯು ಮನಸ್ಸಿನಲ್ಲಿ ಸಂತೋಷಗೊಂಡಿತು. ಅಷ್ಟೇಅಲ್ಲ. ಪ್ರಪಂಚದಲ್ಲಿ ಲಕ್ಷಾಂತರ ಪ್ರಾಣಿಗಳ ರಕ್ತವನ್ನು ಹೀರಿ ಬಂದಿದ್ದ ಈ ಸೊಳ್ಳೆಯ ರಕ್ತ ಎಷ್ಟು ರುಚಿಕರವಾಗಿರುವುದೋ ನೋಡಿಯೇ ಬಿಡಬೇಕೆಂದು ಕುತೂಹಲ ಉತ್ಪನ್ನವಾಯಿತು. ಬಳಲಿಕೆಯಿಂದ ಸೊಳ್ಳೆ ಸ್ವಲ್ಪ ಕಣ್ಣು ಮುಚ್ಚಿದುದನ್ನು ಕಂಡ ಹಲ್ಲಿ, ಹಿಂದಿನಿಂದ ಹೋಗಿ ಏನಾದರಾಗಲೀ ಎಂದುಕೊಂಡು ಅದನ್ನು ಗುಟಕ್ಕೆಂದು ನುಂಗಿಬಿಟ್ಟಿತು. ಇನ್ನೇನಿದೆ? ಪ್ರಪಂಚವೆಲ್ಲಾ ಸುತ್ತಿಬಂದಿದ್ದ ಸೊಳ್ಳೆರಾಜ, ಹಲ್ಲಿಗೆ ಬಲಿಯಾಗಬೇಕಾಯಿತು!

ನಾಲಿಗೆ ಚಾಪಲ್ಯದಿಂದ ಹಲ್ಲಿ ಹೀಗೆ ಮಾಡಿತೇ ಹೊರತು ಸೊಳ್ಳೆರಾಜನನ್ನು ನುಂಗಿದಾಗಲಿಂದ ಅದರ ಹೊಟ್ಟೆಯಲ್ಲಿ ತಳ ಮಳವೆದ್ದಿತು. ಆದಿಶಕ್ತಿ ಕಳುಹಿಸಿದ ದೂತನನ್ನು ಸ್ವಲ್ಪವಾದರೂ ಮುಂದಾಲೋಚನೆಯಿಲ್ಲದೆ ನುಂಗಿ ಬಿಟ್ಟೆನಲ್ಲಾ, ಈ ವಿಷಯ ದೇವಿಗೆ ತಿಳಿಯದೆ ಇರುತ್ತದೆಯೆ? ತಿಳಿದ ಮೇಲೆ ಸುಮ್ಮನಿರುತ್ತಾಳೆಯೆ? ಶಿಕ್ಷಿಸದೆ ಬಿಡುವಳೇ? ಈಗೇನು ಮಾಡಲಿ? ಸೊಳ್ಳೆಯನ್ನೇನೋ ನುಂಗಿಬಿಟ್ಟೆ. ಕೇಳಿದಾಗ ಏನೆಂದು ಉತ್ತರಕೊಡಲಿ? ಎಂದು ತನ್ನಲ್ಲಿ ತಾನೇ ಕಳವಳಪಡುತಿತ್ತು.

ಆದರೂ ಧೈರ್ಯವಹಿಸಿ ಹಲ್ಲಿ ಭಗವಂತನ ಹತ್ತಿರಕ್ಕೆ ಪ್ರಯಾಣ ಮಾಡಿತು. ಅಲ್ಲಿ ಆ ವೇಳೆಗಾಗಲೇ ತುಂಬಾ ಕೋಲಾಹಲಕರವಾಗಿತ್ತು. ಸೊಳ್ಳೆ ರಾಜನು ಎಷ್ಟುಹೊತ್ತಿಗೆ ಬರುವನೋ, ಏನು ಸಮಾಚಾರ ತರುವನೋ ಎಂದು ಅಲ್ಲಿ ನೆರೆದಿದ್ದ ಪ್ರತಿ ಪ್ರಾಣಿಯೂ ಕಾತುರದಿಂದ ಎದುರು ನೋಡುತಿತ್ತು.

ಈ ಮೊದಲೇ ಸೊಳ್ಳೇರಾಜನು ಯಾವ ಪ್ರಾಣಿಯನ್ನೂ ಬಿಡದೆ, ಎಲ್ಲ ಪ್ರಾಣಿಗಳ ರಕ್ತವನ್ನು ಸವಿನೋಡಿದಂತೆಯೂ, ಆತನಿಗೆ ಮಾನವನ ರಕ್ತ ಪ್ರಶಸ್ತವಾಗಿ ತೋರಿ ಬಂತೆಂದೂ ಒಂದು ವದಂತಿ ಹರಡಿತು. ಅದನ್ನು ಕೇಳಿ ಮಾನವರೆಲ್ಲಾ "ಓ, ನಮ್ಮ ಪಾಡು ಮುಗಿಯಿತು" ಎಂದು ಕಳವಳದಿಂದ ಕುಳಿತಿದ್ದರು. ಮಿಕ್ಕ ಪ್ರಾಣಿಗಳು ಮಾತ್ರ



ನಮಗೇನು ಚಿಂತೆಯಿಲ್ಲ ಎಂದು ಸಂತೋಷದಿಂದ ಇದ್ದವು.

ಮತ್ತೆ ಸ್ವಲ್ಪ ಹೊತ್ತಿಗೆಲ್ಲಾ ಹಲ್ಲಿ ಅಲ್ಲಿಗೆ ಬಂದು ದೇವಿಯ ಮುಂದೆನಿಂತು, ವಿನಯದಿಂದ ನಮಸ್ಕಾರಮಾಡಿತು. "ತಾಯಿ, ನಾನು ಸೊಳ್ಳೆರಾಜನ ದೂತ. ಪ್ರಪಂಚ ಪರ್ಯಟನೆ ಮಾಡಿ ಬಂದ ನಮ್ಮ ಪ್ರಭುಗಳು ಸುಕುಮಾರರಾದ್ದರಿಂದ ಬಳಲಿಕೆ ತೀರಿಸಿಕೊಳುತ್ತಿರುವರು...." ಎಂದು ಮೆಲ್ಲನೆ ನಿಧಾನವಾಗಿ ಏನೋ ಕತೆಕಟ್ಟಿ ಹೇಳಲು ಪ್ರಾರಂಭಿಸಿತು.

ಆಗ ದೇವಿ "ಸರಿಯಪ್ಪಾ, ಆ ಸೊಳ್ಳೆ ರಾಜ ಹೋದ ಕಾರ್ಯವೇನಾಯಿತು? ಮೊದಲು ಆ ವಿಷಯ ತಿಳಿಸು" ಎಂದು ಒತ್ತಾಯ ಪಡಿಸಿದಳು.

ಈರೀತಿ ಜಗನ್ಮಾತೆ ತನ್ನನ್ನು ಆತುರದಿಂದ ಪ್ರಶ್ನೆ ಮಾಡುವಳೆಂದು ತಿಳಿದಿರಲಿಲ್ಲ ಹಲ್ಲಿ. ಆದ್ದರಿಂದ ಕಂಗಾರು ಪಡುತ್ತಾ ತೊದಲುತ್ತಾ "ಮನುಷ್ಯನ ರಕ್ತ....ಮನುಷ್ಯನ ರಕ್ತ" ಎಂದು ಹೇಳಬೇಕೆಂದು ಬಾಯಿ ತಿರುಗದೆ "ಮಹಿಷನ ರಕ್ತ....ಮಹಿಷನ ರಕ್ತ" ಎಂದು ಉಚ್ಚರಿಸಿ ಸುಮ್ಮನಿದ್ದುಬಿಟ್ಟಿತು.

ದೇವಿ ಮಂದಹಾಸದಿಂದ "ಸರಿ, ಸೊಳ್ಳೆ ರಾಜನು ಕಳುಹಿದ ವಾರ್ತೆ ಚೆನ್ನಾಗಿದೆ. ಇನ್ನುಮುಂದೆ ನನಗಾಗಿ ಮಾಡುವ ಜಾತ್ರೆ, ಪೂಜೆಗಳಲ್ಲೂ ಮಹಿಷಗಳನ್ನೇ ಬಲಿ ಕೊಡುತ್ತಿರಿ" ಎಂದು ಆಜ್ಞೆಮಾಡಿ ಅಂತರ್ಧಾನವಾದಳು. ಮಹಿಷವೆಂದರೆ ಎಮ್ಮೆ ಕೋಣ.

ಆಗ ಮಾನವ ಜಾತಿಗೆ 'ಗಂಡ ಕಳೆಯಿತಪ್ಪಾ, ದೇವರೇ' ಎಂದು ಮುಖದಲ್ಲಿ ಆನಂದ ತುಂಬಿ ತುಳುಕಿತು. ಅವರಿಗುಂಟಾದ ಸಂತೋಷ ಅಷ್ಟಿಷ್ಟಲ್ಲ. ಮಾನವರೆಲ್ಲಾ ಸೇರಿ ಕೂಡಲೇ ಅಡವಿಯಲ್ಲಿ ಹಲ್ಲಿ ವಾಸವಾಗಿದ್ದ ಮರದಡಿಗೆ ಹೋಗಿ "ಎಲೈ ಹಲ್ಲಿ, ನೀನು ನಮ್ಮ ಜಾತಿಗೆ ಮಾಡಿದ ಮಹೋಪಕಾರ ಮರೆಯುವಂತೆಯೇ ಇಲ್ಲ. ಪ್ರಾಣ ಭಿಕ್ಷೆಯನ್ನು ನೀಡಿದ ಮಹಾನುಭಾವ ನೀನು. ಆದ್ದರಿಂದ ನಿನ್ನನ್ನು ಸದಾ ಸೇವಿಸುವುದು ನಮ್ಮೆಲ್ಲರ ಕರ್ತವ್ಯ. ಆದುದರಿಂದ ನಾವು ನಿನ್ನನ್ನು ಒಂದು ಕೋರಿಕೆ ಕೇಳುತ್ತೇವೆ. ಅದನ್ನು ನೀನು ತಪ್ಪದೆ ಮನ್ನಿಸಬೇಕು. ಅದೇನೆಂದರೆ ನೀನು ಈರೀತಿ ಅರಣ್ಯಗಳಲ್ಲಿ ಮರಗಳಮೇಲೆ, ಕಟ್ಟಿಗೆ, ಬಂಡೆಗಳಮೇಲೆ ಕಾಲಕ್ಷೇಪ ಮಾಡುವುದು ನಮಗೆ ಸರಿಕಾಣಿಸದು. ನಾವು ಕಟ್ಟಿಕೊಂಡ ಮನೆಗಳಲ್ಲಿ ನಮ್ಮೊಂದಿಗೇ ಇದ್ದು ದಿನಾ ನಿನ್ನ ಸಂದರ್ಶನ ಕೊಡುತ್ತಿರಬೇಕು. ಇದು ನಮ್ಮ ಅಭಿಲಾಷೆ ನಿನ್ನ ದರ್ಶನವೇ ನಮಗೊಂದು ಪುಣ್ಯ." ಎಂದು ಕೇಳಿಕೊಂಡರು.

ಮಾನವರ ಅಭೀಷ್ಟವನ್ನು ನೆರವೇರಿಸುವ ಸಲುವಾಗಿಯೇ ಇರಬಹುದೇನೋ ಅಂದೂ, ಇಂದೂ ಸಹ, ಮನೆ ಕಟ್ಟಿಕೊಂಡ ಕೂಡಲೇ ಮೊದಲು ಹಲ್ಲಿ ಬಂದು ಗ್ರಹಪ್ರವೇಶ ಮಾಡಿ ಗೋಡೆಯ ಮೇಲೆ ಕುಳಿತಿರುತ್ತದೆ.






6

[ ತನ್ನ ಮುದ್ದಿನ ಕುವರಿಯರು ಸುಹಾಸಿನಿ, ಸುಭಾಷಿಣಿ, ಸುಕೇಶಿನಿಯರನ್ನು ಹುಡುಕಿ ತಂದವರಿಗೆ ತನ್ನ ರಾಜ್ಯವನ್ನು ಕೊಡುವೆನೆಂದು ರಾಜನು ಡಂಗೂರ ಸಾರಿಸಿದುದನ್ನು ಕೇಳಿ ಭದ್ರಪುರಿ ಅವಳಿಗಳು ಉದಯನ, ನಿಶೀಥ, ಮತ್ತು ಸಂಧ್ಯಾಕುಮಾರರು ರಾಜಕುಮಾರಿಯರನ್ನು ಹುಡುಕುತ್ತ ಹೊರಟಿದ್ದು ಹಿಂದಿನ ತಿಂಗಳು ಓದಿದಿರಿ. ಈಗ ಮುಂದೆ ಓದಿರಿ. ]

ಬಿಳಿಯ ಕುದುರೆಯಮೇಲೆ ಉದಯನ ಮುಂದೆ ಹೋಗುತ್ತಿದ್ದಾನೆ. ಹಗಲು ಹೊತ್ತಾದುದರಿಂದ ಉದಯನನಿಗೆ ತೊಂದರೆಯಿಲ್ಲ. ಆದರೆ ಸಂಧ್ಯ, ನಿಶೀಥರ ವಿಷಯವೇನು? ಅವರಿಗೆ ಕಣ್ಣಿದ್ದೂ ಸಹ ಕುರುಡರಂತೆ ಅಲ್ಲವೇ? ಅವರು ದಾರಿ ಕಾಣಿಸದಿದ್ದರೂ ಮುಂದೆ ಹೋಗುತ್ತಿದ್ದ ಕುದುರೆ ಗೊರಸಿನ ಸಪ್ಪುಳವನ್ನು ಕೇಳಿಸಿಕೊಂಡು, ಅದರ ಹಿಂದೆಯೇ ಹೋಗುತ್ತಿದ್ದರು. ಕ್ರಮಕ್ರಮೇಣ ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ ಮುಳುಗುತ್ತಿದ್ದ. "ನನ್ನ ಕೆಲಸ ಮುಗಿಯಿತು. ಇನ್ನು ನೀನು ದಾರಿ ತೋರಿಸು, ಸಂಧ್ಯಾ" ಎಂದ ಉದಯನ. ಆ ಮಾತಿನ ಪ್ರಕಾರ ಸಂಧ್ಯಾ ದಾರಿ ತೋರಿಸಲು ಮುಂದೆ ಸಾಗಿದನು. ಆತನ ಹಿಂದೆ ನಿಶೀಥ, ಅವನ ಹಿಂದೆ ಉದಯನ ಹೋಗುತ್ತಿದ್ದರು.

ಹಾಗೆ ಪ್ರಯಾಣ ಮಾಡಿ ಕತ್ತಲಾವರಿಸುವ ವೇಳೆಗೆ ಒಂದು ಅರಣ್ಯವನ್ನು ಸೇರಿದರು. ಕತ್ತಲಾದುದರಿಂದ ಉದಯನ, ಸಂಧ್ಯಾ ವಿಶ್ರಾಂತಿ ಪಡೆಯಲೇಬೇಕು. ಆದರೆ ಆ ಅರ್ಧರಾತ್ರಿ ವೇಳೆಯಲ್ಲಿ, ಆ ದಟ್ಟವಾದ ಕಾನನದಲ್ಲಿ ವಿಶ್ರಾಂತಿಯಾದರೂ ಎಲ್ಲಿ ತೆಗೆದುಕೊಳ್ಳುವುದು? ಆಗ ನಿಶೀಥನು ಅವರಿಬ್ಬರನ್ನು ಒಂದು ಮರದ ಮೇಲೆ ಹತ್ತಿಸಿ "ನೀವು ಇಲ್ಲೇ ಕುಳಿತಿರಿ. ನಾನು ಹೋಗಿ ಈ ರಾತ್ರಿ ನಾವು ತಲೆಮರೆಸಿ ಕಾಲಕಳೆಯಲು ಎಲ್ಲಿಯಾದರೂ ಸರಿಯಾದ ಸ್ಥಳ ವಿರುವುದೇನೋ ನೋಡಿ



ಕೊಂಡು ಬರುತ್ತೇನೆ" ಎಂದು ಅವರಿಬ್ಬರ ಕುದುರೆಗಳನ್ನು ಆ ಮರಕ್ಕೆ ಕಟ್ಟಿಹಾಕಿ, ತನ ಕರಿ ಬಣ್ಣದ ಕುದುರೆಹತ್ತಿ ಹೊರಟನು.

ನಿಶೀಥನು ಬಹುದೂರಹೋಗಿ, ಕಡೆಗೆ ಆ ಅರಣ್ಯಮಧ್ಯದಲ್ಲಿ ಒಂದು ಪಾಳುಬಿದ್ದ ಮನೆಯಹತ್ತಿರ ಸೇರಿದನು. ಹೊಸ್ತಿಲಿನಹತ್ತಿರ ಹೋಗಿ ಕದವನ್ನು ತಟ್ಟಿದನು. ಉತ್ತರ ಬರಲಿಲ್ಲ. ಕಿಟಿಕಿಯಿಂದಇಣಿಕಿ ನೋಡಿದನು. ಒಳಗೆ ಯಾವ ವಿಧವಾದ ಶಬ್ದವೂ ಇಲ್ಲ. ಧೈರ್ಯವಹಿಸಿ ಬಾಗಿಲು ತೆಗೆದು ಒಳಗೆ ಪ್ರವೇಶಿಸಿದನು. ಯಾವ ಮೂಲೆಯಲ್ಲಿ ನೋಡಿದರೂ ನಾರುಸುರಳಿಯ ರಾಶಿ. ಅದುಹೊರತು ಮತ್ತೆ ಯಾವ ವಿಚಿತ್ರವೂ ಆ ಮನೆಯಲ್ಲಿ ಕಾಣಲಿಲ್ಲ. ಆ ಮನೆಯ ಯಜಮಾನನು ಯಾರೋ ನೋಡೋಣವೆಂದು ಸ್ವಲ್ಪ ಸಮಯ ಅಲ್ಲೆ ಕಾದಿದ್ದನು. ಆದರೆ ಎಷ್ಟುಹೊತ್ತು ಕಳೆದರೂ ಯಾರೂ ಬಾರದಿರುವುದನ್ನು ನೋಡಿ, ಇದೊಂದು ಪಾಳುಬಿದ್ದ ಮನೆಯಿರಬಹುದೆಂದು ಕೊಂಡನು. ತನಗೆ ಮತ್ತು ತನ್ನ ಸಹೋದರರಿಗೆ ಇದು ತಲೆಮರೆಯಿಸಿಕೊಳ್ಳಲು ಸರಿಯಾದ ಸ್ಥಳವೆಂದು ನಿಶ್ಚಯಿಸಿ, ಮತ್ತೆ ಕಪ್ಪು ಕುದುರೆಯ ಮೇಲೆಹತ್ತಿ, ಉದಯನ, ಸಂಧ್ಯಾ ಇರುವ ಮರದಕಡೆ ಹೊರಟನು.

ಇತ್ತಕಡೆ ನಿಶೀಥನು ಸಹೋದರರನ್ನು ಕೂರಿಸಿ ಸ್ಥಳ ಹುಡುಕಲು ಬಂದುಬಿಟ್ಟ ಮರುಕ್ಷಣವೇ ಸಂಧ್ಯಾ, ಉದಯನರು ಕುಳಿತಿದ್ದ ಮರದಡಿ ಏನೋ ಸಪ್ಪಳವಾಯಿತು. ಅಡವಿಯೆಂದರೆ ಕ್ರಿಮಿ ಕೀಟಗಳೂ, ವನಪಶುಗಳೂ ಇರುವಸ್ಥಳ; ಅಂತಹುವೇನೋ ಇರಬಹುದೆಂದುಕೊಂಡು, ಆತುರದಿಂದ ಅವರು ನಿಶೀಥನ ಆಗಮನವನ್ನೇ ಎದುರು ನೋಡುತ್ತಾ ಕುಳಿತಿದ್ದರು. ಇದ್ದಕ್ಕಿದ್ದಂತೆಯೇ ಉದಯನನು ತನ್ನ ಸೊಂಟ ತಡವಿ ನೋಡಿಕೊಂಡು "ಸಂಧ್ಯಾ, ನಡುವಿಗೆ ಯಾವುದೋ ನಾರು ಸುತ್ತುತ್ತಿರುವಂತಿದೆ" ಎಂದು ಮಾತು ಮುಗಿಸುವುದರಲ್ಲಿದ್ದನು. ಉದಯನನ ಬಾಯಿಯಿಂದ ಈ ಮಾತುಗಳು ಹೊರಬಿದ್ದವೋ ಇಲ್ಲವೋ, ಸಂಧ್ಯಾ ಸಹ "ನನ್ನ ಸೊಂಟಕ್ಕೆ ಅದೇರೀತಿ ಸುತ್ತುತ್ತಿದೆ. ನೀನು ಹೇಳಿದಂತೆ ಯಾವುದೋ ನಾರು ಇದ್ದಂತೆಯೇ ಕಾಣುತ್ತಿದೆ. ಏನಿರಬಹುದು?" ಎಂದು ಸುತ್ತುಮುತ್ತು ತಡವಿ ನೋಡತೊಡಗಿದನು.

ಹೀಗೆ ಅವರು ಆಲೋಚಿಸುತ್ತಿರುವಾಗ, ಅವರ ಸೊಂಟದ ಸುತ್ತಲೂ ಯಾವುದೋ ಹಗ್ಗ ಸುತ್ತಿಕೊಂಡು ಕೆಳಕ್ಕೆ ಎಳೆಯುತ್ತಿರುವಂತೆ ಅವರಿಗೆ ಭಾಸವಾಯಿತು. ಕೈಯಿಂದ ಸುತ್ತಲೂ ತಡವಿನೋಡಿಕೊಂಡರು. ಎಲ್ಲೂ ಮನುಷ್ಯರಿರುವ ಸೂಚನೆ ಕಾಣಲಿಲ್ಲ.

ಇಷ್ಟರಲ್ಲಿ "ಎಂಥೆಂಥವರಿಗೋ ನಾವು ಕಾಣಿಸಲಿಲ್ಲ. ನಿಮಗೆ ಕಾಣಿಸುತ್ತೇನೆಯೇ?" ಎಂಬ ಮಾತುಗಳು ಕೇಳಿಬಂದವು.

ಯಾವಾಗ ಈ ಮಾತುಗಳು ಕೇಳಿಸಿದವೋ ಆಗ ತಮ್ಮನ್ನು ಯಾವುದೋ ಪಿಶಾಚಿಯೋ ಭೂತವೋ ಈರೀತಿ ಹಗ್ಗದಿಂದ ಬಿಗಿಯುತ್ತಿರುವುದೆಂದು ತಿಳಿದುಕೊಂಡರು ಉದಯನ ಮತ್ತು ಸಂಧ್ಯಾ ಕುಮಾರರು. ಆದರೆ ಏನು ಮಾಡಬೇಕೋ ತಿಳಿಯದಾಯಿತು ಅವರಿಗೆ. "ಈಗ ನಮ್ಮ ನಿಶೀಥ ಇಲ್ಲ. ಆತನಿದ್ದಿದ್ದರೆ ನಿನ್ನನ್ನು ಒಂದು ಕೈ ನೋಡಿಕೊಳ್ಳುತ್ತಿದ್ದೆವು. ಈಗಲೂ ಏನೂ ಮಿಂಚಿಹೋಗಲಿಲ್ಲ. ಈಗಾಗಲೇ ಆತನು ಹಿಂತಿರುಗಿ ಬರುತ್ತಿರಬಹುದು. ಅವನು ಬರುವ ಮೊದಲೇ ಮರ್ಯಾದೆಯಾಗಿ ನಮ್ಮನ್ನು ಬಿಟ್ಟು ಹೊರಟರೆ ಸರಿ, ಇಲ್ಲದಿದ್ದರೆ ನಿನ್ನ ಗತಿ ನೆಟ್ಟಗಾಗುವುದಿಲ್ಲ" ಎಂದು ಬೆದರಿಸಿದರು.

ಆದರೆ ಆ ಬಂದಾತ ಸಾಮಾನ್ಯನಲ್ಲ! "ಒಸ್, ನನ್ನ ಹತ್ತಿರಲೇ ನಿಮ್ಮ ಬೆದರಿಕೆ?" ನಿಮ್ಮ ಅಣ್ಣನಂತಹವರು ಒಬ್ಬರಲ್ಲ, ನೂರು ಜನ ಬಂದರೂ ನನ್ನನ್ನು ಏನೂ ಮಾಡಲಾರರು.





ಅಷ್ಟಕ್ಕೂ ನಿಮ್ಮಣ್ಣ ಬರುವವರೆವಿಗೂ ನಾನಿಲ್ಲಿದ್ದರೆ ತಾನೇ" ಎಂದು ಆಗಂತುಕನೆಂದನು. ಸಂಧ್ಯಾ ಉದಯನರು ತಮ್ಮ ಕತ್ತಿಗಳನ್ನೆಳೆದು ತಮಗೆ ಸುತ್ತಿಕೊಂಡ ನಾರನ್ನು ಕತ್ತರಿಸಿದರು. ಆದರೇನು ವಿಚಿತ್ರ! ಆ ನಾರು ಬಿಡದೆ ಮತ್ತೆ ಮತ್ತೆ ಬೆಳೆದು ಅವರ ಕೈ ಮೈಗೆಲ್ಲಾ ಸುತ್ತಿ ಬಂಧಿಸತೊಡಗಿತು. ಅವರ ಪ್ರಯತ್ನ ನಿಷ್ಫಲವಾಯಿತು. ಹಹ್ಹಹ್ಹ! ಎಂದು ಕರ್ಕಶವಾಗಿ ನಕ್ಕ ಶಬ್ದ ಕೇಳಿಸಿತು. ಬಂದವನೊಬ್ಬ ತಂತ್ರಗಾರ ಸಣ್ಣ ಮನುಷ್ಯ. ತನ್ನ ಮಾಯಾ ಗಡ್ಡದ ಕೂದಲಿನಿಂದ ಇವರನ್ನು ಬಂಧಿಸಿ ಎಳೆದುಕೊಂಡು ಹೋಗ ತೊಡಗಿದನು. ಸರಸರನೆ ಹೋಗುತ್ತಾ ಆತ ಒಂದು ಕೀಟಲೆ ಕೆಲಸ ಮಾಡಿದನು. ಮರಕ್ಕೆ ಕಟ್ಟಿ ಹಾಕಿದ್ದ ಎರಡು ಕುದುರೆಗಳ ಮೇಲೂ ಯಾವುದೋ ಒಂದು ಭಸ್ಮ ಎರಚಿದನು. ಹಾಗೆ ಎರಚಿದಕೂಡಲೇ ಅವೆರಡೂ ಮಾಯವಾದವು.

ಮತ್ತೆ ಸ್ವಲ್ಪಹೊತ್ತಿಗೆಲ್ಲಾ ನಿಶೀಥ ಮರದ ಹತ್ತಿರ ಬಂದು ನೋಡಿದನು. ಏನಿದೆ ಅಲ್ಲಿ? ಮರದ ಮೇಲೆ ತನ್ನ ಸಹೋದರರಿಲ್ಲ; ಮರದ ಕೆಳಗೆ ಕುದುರೆಗಳೂ ಇಲ್ಲ. ಆತನಿಗೆ ಏನೂ ತೋಚದಾಯಿತು. ಒಂದು ಸಮಯ ತಾನು ಬರುವುದು ಆಲಸ್ಯವಾಯಿತೆಂದು ಅವರು ತನ್ನನ್ನು ಹುಡುಕುತ್ತಾ ಮತ್ತೊಂದು ದಾರಿಯಲ್ಲಿ ಹೊರಟುಬಿಟ್ಟರೇನೋ ಎಂದುಕೊಂಡು ತನ್ನ ಸಹೋದರರನ್ನು ಹುಡುಕುತ್ತಾ ಕಪ್ಪು ಕುದುರೆಯ ಮೇಲೆ ಕುಳಿತು ಹಿಂದಿರುಗಿದನು. ಹಾಗೇ ಹುಡುಕುತ್ತಾ ನಿಶೀಥ ಆ ಅರಣ್ಯದಲ್ಲೆಲ್ಲಾ ಸುತ್ತಾಡಿದನು. ಆದರೆ ಅವರ ಜಾಡೇ ತಿಳಿಯಲಿಲ್ಲ. ಆಗಲೇ ರಾತ್ರಿ ಬಹುಭಾಗ ಕಳೆದು ಹೋಗಿತ್ತು. ಮತ್ತೊಂದೆರಡು ಗಂಟೆಗಳಲ್ಲಿ ಬೆಳಗಾಗುವುದು. ಬೆಳ್ಳಂಬೆಳಗಾದ ಕೂಡಲೇ ತಾನು ಒಂದು ಹೆಜ್ಜೆಯಾದರೂ ಮುಂದಿಡಲಾರ. ಆದ್ದರಿಂದ ಕೊನೆಯ ಪ್ರಯತ್ನವೆಂದು ಮತ್ತೊಂದು ಸಾರಿ ಅಡವಿಯಲ್ಲೆಲ್ಲಾ ಹುಡುಕಾಡಿದನು. ಲಾಭವಿಲ್ಲದಾಯಿತು. ಕಡೆಗೆ ಏನೋ ಆಲೋಚನೆ ಹೊಳೆದು ಕೂಡಲೇ ಸರ್ರನೆ ಹಿಂದಕ್ಕೆ ತಿರುಗಿ ಆ ಪಾಳುಬಿದ್ದ ಮನೆಗೆ ಬಂದು ಸೇರಿದನು.

తన్న ಸೋದರರು ಅಲ್ಲಿ ಬಂದಿರಬಹುದೆಂದೂ ಅವರ ಕುದುರೆಗಳನ್ನು ಹೊರಗೆ ಕಟ್ಟಿ ಹಾಕಿರ ಬಹುದೆಂದೂ ನೆನೆಸಿದ್ದ ನಿಶೀಥ. ಆದರವು ಕಾಣದಿರಲು ನಿರಾಶೆ ಹೊಂದಬೇಕಾಯಿತು. ಆದರೂ ನೋಡೋಣವೆಂದು ಬಾಗಿಲು ತಳ್ಳಿ ಕೊಂಡು ಮನೆಯೊಳಗೆ ಪ್ರವೇಶಿಸಿದನು. ಏನಿದು ವಿಚಿತ್ರ! ದೊಡ್ಡ ನಾರಿನ ಹಗ್ಗದಿಂದ ಬಂಧಿಸಲ್ಪಟ್ಟಿದ್ದ ಉದಯನ, ಸಂಧ್ಯಾಕುಮಾ ರರು ಒಂದು ಕೋಣೆ ಮೂಲೆಯಲ್ಲಿ ನಿದ್ದೆ ಮಾಡುತ್ತಿದ್ದಾರೆ. ಭೀಕರವಾದ ದೃಶ್ಯ ಮತ್ತೊಂದು! ಉದಯನನ ಕೈಯೊಂದು ಮಾಯವಾಗಿದೆ!! ಆದರೆ ಕೈ ತುಂಡರಿಸಿದ ಗುರುತು ಮಾತ್ರವಿಲ್ಲ !!!



ಇದೆಲ್ಲವನ್ನು ಕಂಡು ನಿಶೀಥನಿಗೆ ಬುದ್ಧಿ ಭ್ರಮಣೆಯಾದಂತಾಯಿತು. ಸ್ವಲ್ಪ ಸಮಯ ವಾದ ಮೇಲೆ ಚೇತರಿಸಿಕೊಂಡು ಸಹೋದರ ರನ್ನು ತಟ್ಟಿ ಎಬ್ಬಿಸಿದನು. ನಿಶೀಥನನ್ನು ಕಂಡ ಕೂಡಲೇ ಅವರಿಗೆ ಉಸಿರುಬಂದಂತಾಯಿತು. "ತಮ್ಮಾ ಇಲ್ಲಿರುವವನೊಬ್ಬ ಮಾಯಾವಿ, ತಂತ್ರಗಾರ; ಈ ದುಷ್ಟನನ್ನು ತಪ್ಪಿಸಿಕೊಂಡು ಹೇಗೆಬಂದೆಯಪ್ಪಾ. ಮತ್ತೆ ನಾವು ಮೂವರೂ ಒಟ್ಟಿಗೆ ಸೇರುವೆವೆಂಬ ಆಶೆಯೇ ನಮಗಿರ ಲಿಲ್ಲ." ಎಂದು ನಿಶೀಥನನ್ನು ಆಲಂಗಿಸಿದರು ಸಹೋದರರಿಬ್ಬರೂ!

"ನಿಮಗೇನೂ ಭಯವಿಲ್ಲ. ಹೆದರಬೇಡಿ. ಇಲ್ಲಿಗೆ ಹೇಗೆ ಬಂದಿರಿ? ಇದು ಹೇಗಾಯಿತು. ಅಣ್ಣಾ ನಿನ್ನ ಕೈ ಏನಾಯಿತು?" ಎಂದು ಆತುರದಿಂದ ಪ್ರಶ್ನೆಗಳನ್ನು ಹಾಕಿದನು ನಿಶೀಥ.

"ನಿಶೀಥಾ, ನೀನು ನಮ್ಮನ್ನು ಬಿಟ್ಟು ತೆರ ಳಿದ ತರುವಾಯ ಸ್ವಲ್ಪಹೊತ್ತಿಗೆಲ್ಲಾ ನಮ್ಮ ನ್ನೊಬ್ಬ ತಂತ್ರಗಾರ ಹಗ್ಗದಿಂದ ಬಂಧಿಸಿ ತಂದು ಈ ಮನೆಯಲ್ಲಿ ಕೂಡಿ ಹಾಕಿದಾನೆ. ಆ ಧೂರ್ತನು ಯಾರೋ, ಹೇಗಿರುವನೋ, ಹೇಗೆ ನಮ್ಮನ್ನು ಕಟ್ಟಿ ಹಾಕಿದನೋ, ನಮಗೆ ಕತ್ತಲೆಯಲ್ಲಿ ತಿಳಿಯಲಾಗಲಿಲ್ಲ. ಯಾವಾಗ ಬೆಳಗಾಗುವುದೋ ಎಂದು ಕಾತುರರಾಗಿದ್ದೆವು. ಇನ್ನೇನು ಬೆಳಗಾಗುವ ಸಮಯವಾದುದ ರಿಂದ ನನಗೆ ಸ್ವಲ್ಪ ತುಸ ದೃಷ್ಟಿಲಾಭ ಬಂತು. ನಮ್ಮನ್ನು ಇಲ್ಲಿಗೆ ಕಟ್ಟಿ ತಂದಾತ ಒಬ್ಬ



ವಿಚಿತ್ರ ಮನುಷ್ಯ. ಅವನನ್ನು ನೋಡಿ ನನಗೆ ನಗು ಬಂತು, ಕೋಪವೂ ಬಂತು. ನೆಲದಿಂದ ಗೇಣುದ್ದ ಎತ್ತರವಿದ್ದಾನೆ ಆಸಾಮಿ. ಆದ ರೊಂದು ವಿಚಿತ್ರ. ಅವನಿಗೆ ನೂರು ಗೇಣುದ್ದದ ಗಡ್ಡವಿದೆ. ಆ ಗಡ್ಡವೇ ನಮ್ಮನ್ನು ಕಟ್ಟಿ ಹಾಕಿ ತಂದುದು. ಇಷ್ಟರವರೆವಿಗೂ ಅವನು ನಮ್ಮ ಪಕ್ಕದಲ್ಲೇ ಮಲಗಿದ್ದ. ಆತನೆದ್ದು ಈಗಲೇ ಎಲ್ಲಿಗೋ ಹೋದಂತಿದೆ. ಅವನು ಎದ್ದು ಹೋಗುವ ಮುಂಚೆ ಇಲ್ಲಿ ನಿನ್ನ ಹೆಜ್ಜೆಯ ಗುರುತು ಕಾಣಿಸಿತು. ಅವು ಕಣ್ಣಿಗೆ ಬಿದ್ದ ಕೂಡಲೇ ಚೆಂಕಿಕಾರುತ್ತಾ "ಓಹೋ, ನಿಮ್ಮ ಅಣ್ಣ ಇಲ್ಲಿಗೆ ಬಂದು ಹೋದಂತೆಯಿದೆ ಯಲ್ಲಾ. ಸರಿ, ಇರಲಿ! ಅವನನ್ನೂ ಸಹ ಹಿಡಿದು ತರುತ್ತೇನೆ. ಎಂದು ತಟಕ್ಕನೆ ಎದ್ದ.

ಆಗ ನನಗೆ ಮೈ ಉರಿಯಿತು. ಅವನ ಗಡ್ಡ ಹಿಡಿದುಕೊಂಡು ಒಂದು ಸಾರಿ ಎಳೆದೆ. ನಾಲ್ಕು ದೊಡ್ಡ ಕೂದಲುಗಳು ಕಿತ್ತು ಬಂದುವು. ರಕ್ತ ಜೊಳ ಜೊಳ ಸುರಿಯಿತು.

ಅವನು ಕೋಪದಿಂದ 'ಎಲವೋ, ನಿನಗೆಷ್ಟು ಸೊಕ್ಕು. ಸಧ್ಯ, ನನ್ನ ಗಡ್ಡವೆಲ್ಲಾ ಕಿತ್ತುಬಿಡಲಿಲ್ಲ.' ಎಂದು ಗದರಿಸಿದ. 'ನನ್ನ ಗಡ್ಡವೇ ನನ್ನ ಪಂಚಪ್ರಾಣಗಳು. ಇದರಲ್ಲಿ ಒಂದು ಕೂದಲು ಉದರಿತೆಂದರೆ ಒಂದು ಪ್ರಾಣ ಹಾರಿಹೋದಂತೆಯೇ ಸರಿ. ಈ ದುರುಳ ನನ್ನ ನಾಲ್ಕು ಉದ್ದನೆಯ ಕೂದಲು ಕಿತ್ತುಹಾಕಿದನಲ್ಲಾ! ಅವು ಮತ್ತೆ ಈ ಜನ್ಮದಲ್ಲಿ ಬೆಳೆಯುವ ಸೂಚನೆಯಿಲ್ಲ. ಹಾಳಾಯಿತು.' ಎಂದು ಗೊಣಗುಟ್ಟುತ್ತಾ, ನನ್ನ ಕಡೆತಿರುಗಿ "ಎಲೋ, ನಿನ್ನತಪ್ಪಿಗೆ ತಕ್ಕ ಶಿಕ್ಷೆ ಅನುಭವಿಸು" ಎಂದು ಕಿಸೆಯಿಂದ ಯಾವುದೋ ಅಂಜನ ತೆಗೆದು ನನ್ನ ಭುಜಕ್ಕೆ ತೀಡಿದ. ಅಷ್ಟೇ. ಆ ಮರುಕ್ಷಣವೇ ನನ್ನ ಕೈ ಮಾಯವಾಯಿತು. ಈ ಕಾರ್ಯ ಮಾಡಿದ ತರುವಾಯ ಅವನು ನಮ್ಮನ್ನು ಗಂಟುಹಾಕಿರುವವರೆವಿಗೆ ತನ್ನ ಗಡ್ಡವನ್ನು ಕತ್ತರಿಸಿಕೊಂಡು ಸುಲಭವಾಗಿ ಎದ್ದ. ಆದರೆ ಮತ್ತೊಂದು ಕೌತುಕವೇನೆಂದರೆ ಆ ಉದ್ದನೆಯ ಗಡ್ಡ ಮತ್ತೆ ಮೊದಲಿನಂತೆ ಬೆಳೆದುಬಿಟ್ಟಿತು" ಎಂದು ಹೇಳಿಮುಗಿಸಿದನು. ಇದೆಲ್ಲ

ವನ್ನೂ ಕೇಳಿ ನಿಶೀಥ ಬಹಳ ಆಶ್ಚರ್ಯ ಗೊಂಡನು.

ಈ ವೇಳೆಗಾಗಲೆ ಬೆಳಗಾಯಿತು. ಆಗ ಉದಯನನು "ಸರಿ, ಇನ್ನು ಆಲಸ್ಯಮಾಡು ವುದು ತರವಲ್ಲ. ಅವನು ನಿನಗಾಗಿ ಸುತ್ತಿ ಸುತ್ತಿ ಬಳಲಿಬೇಸತ್ತು ಈಗ ಮನೆಕಡೆ ಬರುತ್ತಿರ ಬಹುದು. ನಿಶೀಥ ಬೆಳಗಾಯಿತಾದುದರಿಂದ ನೀನು ಏನೂ ಮಾಡಲಾರೆ. ಆದುದರಿಂದ ನನ್ನ ಬದಲಾಗಿ ನಿನ್ನನ್ನು ಸಂಧ್ಯನೊಂದಿಗೆ ಸೇರಿಸಿ ಕಟ್ಟುಹಾಕುತ್ತೇನೆ. ಒಂದು ಕೈ ಮಾತ್ರ ಕಾಣಿಸುವಂತೆ ಜಾಗರೂಕತೆ ವಹಿಸ ಬೇಕುನೋಡು. ಮಿಕ್ಕವಿಷಯ ಆಮೇಲೆ ನೋಡೋಣ" ಎಂದ ಉದಯನ.

ಮೂವರೂ ಈ ವ್ಯವಸ್ಥೆಗೆ ಒಪ್ಪಿಕೊಂಡರು. ಕೂಡಲೇ ನಿಶೀಥ ಅವರ ಕಟ್ಟುಗಳನ್ನು ಬಿಚ್ಚಿದನು. ಉದಯನನು ಎದ್ದು, ನಿಶೀಥ ನನ್ನು ಸಂಧ್ಯಾ ಕುಮಾರನೊಂದಿಗೆ ಏನೂ ಮೋಸತಿಳಿಯದಂತೆ ಕಟ್ಟಹಾಕಿದನು. ಹೊರಗೆ ಬಿಟ್ಟಿದ್ದ ನಿಶೀಥನ ಕುದುರೆಯನ್ನ ಅಲ್ಲೇ ಹತ್ತಿರದಲ್ಲಿದ್ದ ಒಂದು ಗುಹೆಯಲ್ಲಿ ಕಟ್ಟಿ ಹಾಕಿ ತಾನು ಮತ್ತೆ ಆ ಪಾಳುಬಿದ್ದ ಮನೆಯ ಸಮೀಪದಲ್ಲಿದ್ದ ಬಂಡೆಗಳ ಪಕ್ಕದಲ್ಲಿ ಅವಿ ತಿಟ್ಟುಕೊಂಡನು.

ಸರಿಯಾಗಿ ಮಧ್ಯಾಹ್ನದವೇಳೆಗೆ ಆಮಾ ರುದ್ಧ ಗಡ್ಡದ ಗೇಣುದ್ದ ಮನುಷ್ಯ "ಆಗಲಿ,



ಎಲ್ಲಿಗೆ ಹೋಗುತ್ತಾನೆ. ಇಂದಿಲ್ಲ ನಾಳೆಸಿಕ್ಕು ತ್ತಾನೆ. ಅಷ್ಟೇ. ಅಹ್ಹಹ್ಹಾ, ಒಹ್ಹೊಹ್ಹೋ" ಎಂದು ಗಹಗಹಿಸಿ ನಗುತ್ತಾ ಉದಯನನು ಅವಿತಿಟ್ಟುಕೊಂಡಿದ್ದ ಬಂಡೆಗಳ ಪಕ್ಕದಲ್ಲೇ ಹಾದು ಹೋದನು. ಅವನು ಮನೆಯನ್ನು ಸೇರುವವರೆವಿಗೂ ಸುಮ್ಮನಿದ್ದು ಉದಯನನು ಮೆಲ್ಲಗೆ ಅಡಿಯಿಡುತ್ತಾ ಒಂದು ಕಿಟಕಿಯ ಹತ್ತಿರ ಬಂದು ಒಳಗೆ ಇಣಿಕಿ ನೋಡಿದನು. ಆಗೊಂದು ವಿಚಿತ್ರಕಾಣಿಸಿತು ಉದಯನನಿಗೆ. ಆಮಾರುದ್ದ ಗಡ್ಡದ ಗೇಣುದ್ದ ಮನುಷ್ಯ ತನ್ನ ಕಿಸೆಯಿಂದ ಯಾವುದೋ ಭಸ್ಮ ತೆಗೆದು, ನಿಶೀಥ, ಸಂಧ್ಯಾ ಕುಮಾರರ ಮೇಲೆ ಎರಚಿ ದನು. ಕೂಡಲೇ ಅವರು ಗುರುತು ಸಿಕ್ಕದಂತೆ ಮಾಯವಾದರು. ಆ ತರುವಾಯ ತನ್ನ ಕೊರ

ಳಲ್ಲಿದ್ದ ಒಂದು ಸರವನ್ನು ತೆಗೆದು ಒಂದು ಗೂಟಕ್ಕೆ ನೇತುಹಾಕಿದನು. ಏನಿದು ಆಶ್ಚರ್ಯ! ಆ ಸರ ತೆಗೆದನೋ ಇಲ್ಲವೋ ಅವನು ಒಬ್ಬ ಮಾಮೂಲು ಮನುಷ್ಯನಂತೆ ಆದನು. ಗಡ್ಡವೂ ಇಲ್ಲ; ಏನೂ ಇಲ್ಲ.

ಇದೆಲ್ಲವನ್ನು ಉದಯನ ಕಿಟಕಿಯಿಂದ ನೋಡುತ್ತಲೇ ಇದ್ದನು. ಕೊರಳಲ್ಲಿದ್ದ ಸರವನ್ನು ತೆಗೆದಿಟ್ಟು, ಆ ಮನುಷ್ಯ ಗೊರಕೆ ಹೊಡೆಯುತ್ತಾ ನಿದ್ದೆಹೋದನು. ಈ ಸಮಯವನ್ನೇ ಕಾಯುತ್ತಿದ್ದ ಉದಯನ ಮೆಲ್ಲಗೆ ಮನೆಯೊಳಕ್ಕೆ ಪ್ರವೇಶಿಸಿ ಆ ಸರವನ್ನು ಎತ್ತಿ ತನ್ನ ಕೊರಳಿಗೆ ಹಾಕಿಕೊಂಡನು. ಓ, ಇದೇನು? ಉದಯನ ಕೂಡಲೇ ಮಾರುದ್ದ ಗಡ್ಡದ, ಗೇಣುದ್ದ ಮನುಷ್ಯನಾಗಿ ಬದಲಾಯಿಸಿದಾನೆ. ಈ ವಿಚಿತ್ರ ಬದಲಾವಣೆ ಕಂಡು ಉದಯನನಿಗೆ ನಗು ಬಂತು. 'ಓಹೋ, ಇದೋ ನಿನ್ನ ತಂತ್ರ' ಎಂದುಕೊಂಡ ಮನಸ್ಸಿನಲ್ಲಿ. ತನ್ನ ಅಂಗಿಯ ಕಿಸೆಗಳಲ್ಲಿ ಕೈ ಹಾಕಿ ನೋಡಿದರೆ ಒಂದು ಕಿಸೆಯಲ್ಲಿ ಬಿಳಿ ಭಸ್ಮವಿತ್ತು. ಮರದ ಕೆಳಗಿದ್ದ ಕುದುರೆಗಳನ್ನೂ ಮನೆಯಲ್ಲಿದ್ದ ಮನುಷ್ಯರನ್ನೂ ಮಾಯಮಾಡಿದ್ದು ಈ ಭಸ್ಮದ ಸಹಾಯದಿಂದಲೇ! ಎರಡನೇ ಕಿಸೆಯಲ್ಲಿ ಒಂದು ಅಂಜನದ ಡಬ್ಬಿ ಇದೆ.

ಈ ಅಂಜನವನ್ನು ಹಚ್ಚಿ ಉದಯನನ ಕೈ ಮಾಯ ಮಾಡಿದ್ದ ಆ ತಂತ್ರಗಾರ. ಮೂರನೇ ಜೋಬಿನಲ್ಲಿ ಅಂತಹದೇ ಮತ್ತೊಂದು ಅಂಜನದ ಡಬ್ಬಿ, ಒಂದು ದೊಡ್ಡ ಚಾಕ, ಮತ್ತು ಇನ್ನೊಂದು ಯಾವುದೋ ಕರಿ ಭಸ್ಮವೂ ಇತ್ತು. ಆದರೆ ಅವುಗಳಲ್ಲಿ, ಯಾವುದು, ಯಾವಾಗ ಯಾವುದಕ್ಕೆ ಉಪಯೋಗವಾಗುವುದೋ ಉದಯನನಿಗೆ ತಿಳಿಯದಾಗಿತ್ತು.

(ಗಡ್ಡದವನ ತಂತ್ರ ತಿಳಿದ ಉದಯನ, ತನಗೆ ಸಿಕ್ಕಿದವಸ್ತುಗಳಿಂದ ಏನು ಸಾಧಿಸಿದ? ಆ ಮಾರುದ್ದ ಗಡ್ಡದ ಗೇಣುದ್ದ ಮನುಷ್ಯ ಅವನನ್ನು ಅಷ್ಟಕ್ಕೆ ಬಿಟ್ಟುಬಿಟ್ಟನೇ? ಇವೆಲ್ಲಾ ಮುಂದಿನ ತಿಂಗಳು ಓದಿ ನೋಡಿರಿ.)





# ಜಯ ಸಾಗರ



ಒಂದಾನೊಂದು ಕಾಲವಲ್ಲಿ ಅಸ್ಸಾಂ ದೇಶವನ್ನು ಗದಾಪಾಣಿ ಎಂಬ ರಾಜನು ಪಾಲಿಸುತ್ತಿದ್ದನು. ರಾಣಿ ಜಯಮತಿ. ಆ ದಂಪತಿಗಳು ತಮ್ಮ ರಾಜ್ಯದ ಪ್ರಜೆಗಳನ್ನು ಹೆತ್ತ ಮಕ್ಕಳಂತೆ ನೋಡಿಕೊಳ್ಳುತ್ತಿದ್ದುದರಿಂದ ಪ್ರಜೆಗಳೆಲ್ಲಾ ಗದಾಪಾಣಿಯ ಆಳ್ವಿಕೆಯಲ್ಲಿ ಯಾವ ತೊಂದರೆಯೂ ಇಲ್ಲದೆ ಸುಖವಾಗಿ ಜೀವಿಸಿಕೊಂಡಿದ್ದರು. ಆದರೆ ರಾಜನೆಂದಮೇಲೆ, ಆತನು ಎಷ್ಟೇ ಒಳ್ಳೆಯವನೆಂದು ಪ್ರಸಿದ್ಧಿಗೊಂಡರೂ ಗದಾಪಾಣಿಗೂ ಒಬ್ಬ ಶತ್ರುವಿದ್ದ. ಅವನ ಹೆಸರು ಲಾರಾರಾಜ. ಲಾರಾರಾಜ ಶತಮೂರ್ಖ, ದುಷ್ಟ. ತನ್ನ ಹತ್ತಿರ ಅಗಾಧವಾದ ಸೈನ್ಯ ಬಲ ಇದೆಯೆಂದು ಆತನು, ಅಷ್ಟಕ್ಕೆ ಇಷ್ಟಕ್ಕೆ ನೆರೆಹೊರೆ ಚಿಕ್ಕಪುಟ್ಟ ಅರಸರಮೇಲೆ ದಂಡೆತ್ತಿ ಹೋಗುತ್ತಿದ್ದನು. ಎಂದೋ ಒಂದುದಿನ ತನ್ನ ಮೇಲೂ ಅವನು ದಂಡೆತ್ತಿ ಬರಬಹುದೆಂದು ಗದಾಪಾಣಿ ಊಹಿಸದೆ ಇರಲಿಲ್ಲ.

ಕೆಲವು ಕಾಲವಾದಮೇಲೆ ಲಾರಾರಾಜ ಹಠಾತ್ತನೆ ಗದಾಪಾಣಿಯ ಮೇಲೆ ದಂಡೆತ್ತಿ ಬಂದು ಆತನ ರಾಜ್ಯವನ್ನು ವಶಮಾಡಿಕೊಂಡನು. ಸೈನ್ಯವಿದೆಯಲ್ಲಾ ಎಂದು ದಂಡೆತ್ತಿ ಹೋಗಿ ದುರಾಸೆ ಪೂರ್ತಿ ಮಾಡಲು ಗದಾಪಾಣಿಯ ರಾಜ್ಯ ವಶಮಾಡಿಕೊಂಡನೇ ಹೊರತು ಮನಶ್ಶಾಂತಿ ಲಾರಾರಾಜನಿಗೆ ಇಲ್ಲದೇಹೋಯಿತು. ಏಕೆಂದರೆ ಲಾರಾರಾಜ ಕ್ಷತ್ರಿಯ ವಂಶದವನಲ್ಲ. ಅದರಿಂದ ಆತನ ಪರಿಪಾಲನೆಯನ್ನೂ ಪ್ರಜೆಗಳು ಸಮ್ಮತಿಸಲಾರರು. ಈಗೇನೋ ಸೈನ್ಯದ ಸಹಾಯದಿಂದ ಪ್ರಜೆಗಳನ್ನು ಅಡಗಿಸಬಹುದು. ಆದರೆ ಕೆಲವುದಿನಗಳಲ್ಲೇ ಜನ ದಂಗೆ ಏಳುವರೆಂಬ ಅಂಶ ಆತನಿಗೆ ಗೊತ್ತು. ಅಷ್ಟೇ ಅಲ್ಲ, ಗದಾಪಾಣಿಯ ಸಾತ್ವಿಕತೆ ಮತ್ತು ತನ್ನ ಧೂರ್ತತನವನ್ನು ರಾಜ್ಯದ ಪ್ರಜೆಗಳೆಲ್ಲ ಚೆನ್ನಾಗಿ ಅರಿತಿರುವರು. ಈಕಾರಣಗಳಿಂದ ರಾಜ್ಯ ಲಭಿಸಿದ್ದರೂ ಸಹ ಮನಸ್ಸಿಗೆ ಶಾಂತಿಯಿಲ್ಲವಾಯಿತು.

'ಚಿಟ್ಟಿಬಾಬು' ಮದರಾಸು.



ನ್ನೆಲ್ಲಾ ವಿರೂಪಗೊಳಿಸುತ್ತಿದ್ದನು. ಏಕೆ ಹೀಗೆ ಮಾಡುತ್ತಿದ್ದ ಎಂದು ನಿಮಗೆ ಸಂಶಯ ಬರಬಹುದು. ಇದಕ್ಕೆ ಒಂದುಕಾರಣವಿದೆ. ಕ್ಷತ್ರಿಯವಂಶದಲ್ಲಿ ಅವಯವ ಲೋಪವಿರುವವರು ಯಾರೂ ರಾಜ್ಯವನ್ನು ಆಳಲು ಅರ್ಹರಲ್ಲ ಎಂದು ಆಕಾಲದಲ್ಲಿ ಒಂದು ನಿಯಮವೂ ನಂಬಿಕೆಯೂ ಇತ್ತು. ಆದುದರಿಂದ ಕಣ್ಣಿಗೆ ಕಂಡವರನ್ನೆಲ್ಲಾ ಅಂಗವಿಕಲರನ್ನಾಗಿ ಮಾಡುವುದರಿಂದ ರಾಜಕುಮಾರರ ಬಾಧೆ ತನಗೆ ಇರುವುದಿಲ್ಲವೆಂದು ಲಾರಾರಾಜನ ಎಣಿಕೆ.

ಆತನಿಗೆ ಪ್ರಜಾನುರಾಗಿಯಾದ ಗದಾಪಾಣಿ ಪೀಡೆ ಮಾತ್ರ ಉಳಿಯಿತು. ಶತ್ರುಶೇಷವಿಲ್ಲದಂತೆ ಮಾಡಿಕೊಂಡರೆ ಸುಖವಾಗಿರುವುದೆಂದು ಎಣಿಸಿ, ಗದಾಪಾಣಿಯನ್ನು ಹೇಗಾದರೂ ಮಾಡಿ ಹಿಡಿದುತರುವಂತೆ ತನ್ನ ಭಟರನ್ನು ಕಳುಹಿಸಿದನು.

ಆ ಭಟರು ಸುತ್ತಿಸುತ್ತಿ ಕೊನೆಗೆ ಗದಾಪಾಣಿ ವಾಸಿಸುತ್ತಿದ್ದ ಅರಣ್ಯವನ್ನು ಹೊಕ್ಕರು. ಇಷ್ಟು ವರ್ಷಗಳಿಂದ ಅರಣ್ಯದಲ್ಲಿ ವಾಸಿಸುತ್ತಿದ್ದ ಗದಾಪಾಣಿಗೆ ರತ್ನದಂತಿದ್ದ ಒಬ್ಬ ಮಗ ಹುಟ್ಟಿದ್ದನು. ಅವನಿಗೆ ರುದ್ರಸಿಂಹ ಎಂದು ಹೆಸರಿಟ್ಟು, ಅತಿಮಮತೆಯಿಂದ ಬೆಳೆಸುತ್ತಾ, ಆ ಮಗುವಿನ ಆಟಪಾಟಗಳನ್ನು ನೋಡುತ್ತಾ, ತಮ್ಮ ಕಷ್ಟ ಕಾರ್ಪಣ್ಯಗಳನ್ನು ಮರೆತು, ಆ ದಂಪತಿಗಳು ಹೇಗೋ ಹಾಗೆ ಕಾಲಹರಣ ಮಾಡುತ್ತಿದ್ದರು.

ಅತ್ತ ಗದಾಪಾಣಿಯು ತನ್ನ ಪ್ರಿಯವಾದ ರಾಜ್ಯವನ್ನು ಕಳೆದುಕೊಂಡ ಕೂಡಲೇ ಹೆಂಡತಿಯೊಂದಿಗೆ ಅರಣ್ಯಕ್ಕೆ ಹೋಗಿ ತಲೆ ಮರೆಸಿಕೊಳ್ಳಲು ಪ್ರಯತ್ನಿಸಿದನು. ಆತನು ಕಣ್ಣಿಗೆ ಕಾಣಿಸದಿದ್ದರೂ ಸಹ ಲಾರಾರಾಜನಿಗೆ ಭಯಬಿಡಲಿಲ್ಲ. ಪ್ರಜೆಗಳು ಯಾವ ಗಳಿಗೆ ತಮ್ಮ ಅಭಿಮಾನ ಪಾತ್ರನಾದ ಗದಾಪಾಣಿಯನ್ನು ಹುಡುಕಿಕೊಂಡು ಬಂದು ಆತನನ್ನು ಮತ್ತೆ ಪಟ್ಟಕ್ಕೇರಿಸುವರೋ ಇಲ್ಲ, ಮತ್ತೆ ಯಾರಾದರೂ ರಾಜಕುಮಾರನನ್ನು ಬರಮಾಡಿಕೊಂಡು ತಮ್ಮ ರಾಜನನ್ನಾಗಿ ಮಾಡಿಕೊಳ್ಳುವರೋ ಎಂಬ ಭಯ ಆತನನ್ನು ಆವರಿಸಿತ್ತು. ಈ ಭಯದ ಮೂಲಕ, ಲಾರಾರಾಜ ಕಣ್ಣಿಗೆ ಕಾಣಿಸಿದ ರಾಜಕುಮಾರರ

ಇಷ್ಟರಲ್ಲಿ ಲಾರಾರಾಜನು ಕಳುಹಿಸಿದ ಭಟರು ಯಮ ಕಿಂಕರಂತೆ ಕಾಣಿಸಲು ಗದಾ ಪಾಣಿಯ ಎದೆ ಝುಗ್ಗೆಂದಿತು.. ಗಬಕ್ಕನೆ ಎದ್ದು. ಮುದ್ದು ಮಗುವನ್ನು ಕಂಕುಳಲ್ಲಿ ಎತ್ತಿ ಕೊಂಡು, ಹೆಂಡತಿಗೆ ತನ್ನನ್ನು ಹಿಂಬಾಲಿಸು ವಂತೆ ಹೇಳುತ್ತಾ ಓಡಲು ಪ್ರಾರಂಭಿಸಿದನು. ಆತನು ಓಡಿ ಓಡಿ ನಾಗ ಪರ್ವತವನ್ನು ಸೇರಿ ಕೊಂಡು ಅಲ್ಲಿ ಅವಿತಿಟ್ಟುಕೊಂಡನು. ಜಯ ಮತಿಯ ಪಾಡೇನಾಯಿತು ಬಲ್ಲಿರಾ? ಆಕೆ ಭಯದಲ್ಲಿ ದಿಕ್ಕೆಟ್ಟು ಗಂಡನ ಸಮನಾಗಿ ಓಡಲಾರದೆ ಹಿಂದೆ ಬಿದ್ದುಬಿಟ್ಟಳು. ಶತ್ರು ಭಟರು ಆಕೆಯನ್ನು ಹಿಡಿದುಕೊಂಡು ಹೋಗಿ ತಮ್ಮ ರಾಜನ ಮುಂದೆ ನಿಲ್ಲಿಸಿದರು. ಲಾರಾರಾಜನು ಜಯಮತಿಗೆ ಎಷ್ಟು ಹಿಂಸೆ ಮಾಡಿದರೂ ಗದಾಪಾಣಿಯ ಸುಳಿವು ಮಾತ್ರ ತಿಳಿಯದಾಯಿತು. ಗದಾಪಾಣಿಯ ಪ್ರಾಣ ಸ್ನೇಹಿತನೊಬ್ಬನು ಗದಾಪಾಣಿಗೆ ನಡೆದ ವಿಷಯವನ್ನೆಲ್ಲಾ ತಿಳಿಸಿದನು. ಈ ವಿಷಯ ಕೇಳಿದಕೂಡಲೇ ಗದಾಪಾಣಿ ತನ್ನ ಮುದ್ದಿನ ಮಗನನ್ನು ಆ ಸ್ನೇಹಿತನಿಗೆ ಒಪ್ಪಿಸಿ, ತಾನು ಮಾರು ವೇಷದಿಂದ ರಾಜಭವನವನ್ನು ಪ್ರವೇ ಶಿಸಿದನು. ಜಯಮತಿ ತುಂಬಾ ಚುರುಕು ಬುದ್ಧಿಯುಳ್ಳವಳು. ಆಕೆಬಂದಾತನು ಯಾರೋ ಕೂಡಲೇ ಕಂಡುಕೊಂಡಳು. ಆತನನ್ನು ಬಹಳಹೊತ್ತು ತನ್ನ ಹತ್ತಿರ ಕೂರಿಸಿಕೊಳ್ಳು ವುದು ಪ್ರಮಾದಕರವೆಂದು ಆಕೆಗೆ ತಿಳಿದಿತ್ತು.



ಆದ್ದರಿಂದ ತನ್ನ ಮನಸ್ಸಿನಲ್ಲಿದ್ದ ಮಾತುಗಳನ್ನು ಆತನಿಗೆ ತಿಳಿಸಿ, ಕೂಡಲೇ ಕಳುಹಿಸಿ ಬಿಡಲು ಒಂದು ಉಪಾಯ ಹೂಡಿದಳು. ಆತನನ್ನು ನೋಡಿದಕೂಡಲೇ "ಚಿಕ್ಕಪ್ಪಾ, ಇಲ್ಲಿಗೇಕೆ ಬಂದಿರಿ. ನಿಮಗೆ ನನ್ನಮೇಲೆ ನಿಜವಾದ ಅಭಿ ಮಾನವಿದ್ದರೆ ಬಂದದಾರಿ ಹಿಡಿಯಿರಿ. ಒಂದು ವೇಳೆ ನನ್ನ ಪತಿ ನಿಮ್ಮ ಕಣ್ಣಿಗೆ ಬಿದ್ದರೆ ಈ ಪ್ರದೇಶಕ್ಕೆ ಬರಕೂಡದೆಂದು ಹೇಳಿ. ಇದೇ ನಾನು ನಿಮಗೆ ಹೇಳುವ ಮಾತು" ಎಂದಳು.

ಈ ಸಂಭಾಷಣೆ ಕೇಳಿದವರೆಲ್ಲರೂ ಬಂದಾತ ಆಕೆಯ ಕಕ್ಕನೆಂದು ನೆನೆಸಿದರೇ ಹೊರತು. ಆಕೆಯ ಪತಿಯಿರಬಹುದೆಂದು ಒಬ್ಬರಿಗೂ ಅನುಮಾನ ವುಂಟಾಗಲಿಲ್ಲ.

ಆಕೆಯ ಉದ್ದೇಶವನ್ನು ಗ್ರಹಿಸಿ ಗದಾಪಾಣಿ ಕೂಡಲೇ ಕೋಟೆ ಬಿಟ್ಟು ಹೊರಕ್ಕೆ ಹೋಗಿ ಬಿಟ್ಟನು. "ಎಷ್ಟೇ ಧೂರ್ತನಾದರೂ ಸ್ತ್ರೀಯನ್ನು ಕೊಲ್ಲುವನೇ? ಕೆಲಕಾಲ ನಿರ್ಬಂಧದಲ್ಲಿರಿಸಿ, ಬಿಟ್ಟು ಬಿಡುತ್ತಾನೆ." ಎಂದು ಭಾವಿಸಿದ ಗದಾಪಾಣಿ.

ಆದರೆ ವಿಧಿವಿಲಾಸ ಬೇರೊಂದು ರೀತಿಯಿತ್ತು. ಸುಮ ಕೋಮಲೆಯಾದ ಜಯಮತಿ ಶತ್ರುಗಳ ಅಪಹಾಸ್ಯ, ನಿಂದೆಗಳನ್ನು ಸಹಿಸಲಾರದೆ ಕೊರಗಿ ಕೊರಗಿ ಕೆಲ ದಿನಗಳಲ್ಲೇ ಇಹಲೋಕವನ್ನು ತ್ಯಜಿಸಿದಳು. ಜಯಮತಿಯನ್ನು ತನ್ನ ಪಂಚಪ್ರಾಣಗಳೆಂದು ಭಾವಿಸಿದ್ದ ಗದಾಪಾಣಿ ಆಕೆಯ ಮರಣ ವಾರ್ತೆಯನ್ನು ಕೇಳಿದಕೂಡಲೇ ತಾನೂ ಕೊರಗುತ್ತಾ ಪರಲೋಕವನ್ನೈದಿದನು.

ಈರೀತಿ ಆ ಪುಣ್ಯದಂಪತಿಗಳು ಕೈಲಾಸ ವಾಸಿಗಳಾದರೆಂದು ತಿಳಿದು, ಈ ದುರಂತಕ್ಕೆ ಕಾರಣ ಲಾರಾರಾಜನೆಂದು ಪ್ರಜೆಗಳಲ್ಲಿ ಜಿದ್ದು ಏರ್ಪಟ್ಟಿತು. ಅವರು ಉದ್ರೇಕಗೊಂಡರು. ಲಾರಾರಾಜನ ಮೇಲೆ ಸೇಡು ತೀರಿಸಿ ಕೊಳ್ಳಲು ಹವಣಿಸುತ್ತಿದ್ದರು.

ಇಷ್ಟರಲ್ಲಿ ಗದಾಪಾಣಿಯ ಮಗ ರುದ್ರಸಿಂಹನು ಬೆಳೆದು ದೊಡ್ಡವನಾಗುತ್ತಿರುವನೆಂದು ತಿಳಿದು, ಆ ಹುಡುಗನನ್ನು ಕರೆದುಕೊಂಡು ಬಂದರು. ಈ ಸಾರಿ ಪ್ರಜೆಗಳಿಗೆ ಎಲ್ಲಿಲ್ಲದ ಹುಮ್ಮಸ್ಸು ಬಂತು. ಸಾವಿರಪಾಲು ಉತ್ಸಾಹದಿಂದ ಲಾರಾರಾಜನ ಮೇಲೆ ದಂಗೆ ಎದ್ದರು. ಲಾರಾರಾಜನನ್ನು ಪಟ್ಟಣದಿಂದ ಓಡಿಸಿದರು. ಆ ಹುಡುಗ ರುದ್ರಸಿಂಹನಿಗೆ ಪಟ್ಟ ಕಟ್ಟಿದರು.

ರುದ್ರಸಿಂಹನು ತುಂಬಾ ಒಳ್ಳೆಯವನು, ದಯಾಶೀಲ. ಪ್ರಜೆಗಳನ್ನು ಚೆನ್ನಾಗಿ ಪಾಲಿಸುತ್ತಾ, ತಂದೆಯನ್ನು ಮೀರಿಸಿದ ಮಗನೆಂದು ಕೀರ್ತಿ ಪಡೆದನು. ರುದ್ರಸಿಂಹನು ತನ್ನ ತಾಯಿಯ ಜ್ಞಾಪಕಾರ್ಥವಾಗಿ ಶಿವಸಾಗರಕ್ಕೆ ಮೂರು ಮೈಲು ದೂರದಲ್ಲಿ ಒಂದು ಮನೋಹರವಾದ ಸರೋವರವನ್ನು ಕಟ್ಟಿಸಿ ಅದಕ್ಕೆ "ಜಯಸಾಗರ" ಎಂದು ನಾಮಕರಣ ಮಾಡಿದನು. ಅಲ್ಲಿ "ಜಯದಳ" ಎಂಬ ಹೆಸರಿನ ದೇವಾಲಯವನ್ನೂ ಸಹ ಕಟ್ಟಿಸಿದ.

ಈ ಎರಡು ಚಿಹ್ನೆಗಳು ಇಂದಿಗೂ ಅಸ್ಸಾಂ ದೇಶದಲ್ಲಿವೆ.






ಹಿಂದೆ ಒಂದಾನೊಂದು ಕಾಲದಲ್ಲಿ ಒಬ್ಬ ರಾಜನ ಆಸ್ಥಾನದಲ್ಲಿ ಪೆದ್ದಣ್ಣ ಅಂತ ಒಬ್ಬ ಅಗಸನಿದ್ದ. ಪೆದ್ದಣ್ಣನಿಗೆ ತಿಂಗಳಿಗೆ ಒಂದು ವರಹ ಸಂಬಳ. ಮಂತ್ರಿಗೆ ಇನ್ನೂರು ವರಹ. ಪ್ರತಿ ತಿಂಗಳೂ ರಾಜನು ಇನ್ನೂರು ಇನ್ನೂರು ವರಹ ಖಜಾನೆಯಿಂದ ತರಿಸಿ ಮಂತ್ರಿಗೆ ಕೊಡುವುದನ್ನು ಹತ್ತಿರವಲ್ಲೇ ಇದ್ದು ನೋಡುತ್ತಿದ್ದ ಪೆದ್ದಣ್ಣನಿಗೆ ತುಂಬಾ ಖೇದವಾಗುತಿತ್ತು. ದಿನಾ ಇಪ್ಪತ್ನಾಲ್ಕು ಗಂಟೆಗಳೂ ತಾನು ರಾಜನಿಗೆ ಎಲ್ಲ ಚಾಕರಿ ಮಾಡುತ್ತಿದ್ದಾನೆ. ತನಗೆ ಒಂದೇ ವರಹವೇ ಕೊಡುವುದು? ಒಂದೋ, ಎರಡೋ ಗಂಟೆಯಿದ್ದು ಆ ಕಾಗದ ಈ ಕಾಗದ ನೋಡೀ ನೋಡದವನಂತೆ ಮಗುಚಿ ಹಾಕಿ, ರಾಜನೊಂದಿಗೆ ಸ್ವಲ್ಪ ಸಮಯ ಮಾತನಾಡಿ ಹೋಗುವ ಈ ಮಂತ್ರಿಗೆ ಇನ್ನೂರು ವರಹಗಳೇ! ತನಗೂ ಮಂತ್ರಿಗೂ ಸಂಬಳದಲ್ಲಿ ಇಷ್ಟೊಂದು ಅಂತರ ಏಕೆ ಎಂದು ಎಷ್ಟು ಯೋಚಿಸಿದರೂ ಪೆದ್ದಣ್ಣನಿಗೆ ಅರ್ಥವೇ ಆಗಲೊಲ್ಲದು.

ಪೆದ್ದಣ್ಣ ಸುಮ್ಮನಿರಲಾರದೆ ಒಂದು ದಿನ ರಾಜನನ್ನು ಈ ವಿಷಯವಾಗಿ ಕೇಳಿಯೇಬಿಟ್ಟ. ಅವನ ಮಾತನ್ನು ರಾಜ ಶಾಂತವಾಗಿ ಕೇಳಿದನೇ ಹೊರತು ಏನೂ ಉತ್ತರ ಕೊಡಲಿಲ್ಲ. ಆದರೆ ಆತನು ಮನಸ್ಸಿನಲ್ಲೇ ಏನೋ ಯೋಚಿಸಿಕೊಂಡ.

ಅಂದು ಸಾಯಂಕಾಲ ರಾಜನು ಪೆದ್ದಣ್ಣನನ್ನು ಸಂಗಡ ಕರೆದುಕೊಂಡು ಗಾಳಿಸವಾರಿಗೆ ಹೊರಟ. ಅವರಿಗೆ ಎರಡು ಫರ್ಲಾಂಗ್ ದೂರದಲ್ಲಿ ನದೀದಡದ ಹತ್ತಿರ ಜನ ಗುಂಪು ಗೂಡಿ ಉತ್ಸಾಹದಿಂದಿರುವುದು ಕಾಣಿಸಿತು.

ಆಗ ರಾಜ ಅಗಸರವನೊಂದಿಗೆ "ಪೆದ್ದಣ್ಣಾ, ಪೆದ್ದಣ್ಣಾ. ಅದೇನೋ ನೋಡಿಕೊಂಡು ಬಾ" ಎಂದ.

ಪೆದ್ದಣ್ಣ ನದಿದಡಕ್ಕೆ ಓಡಿದ. ಅವನು ಅಲ್ಲಿಂದ ಹಿಂತಿರುಗಿ ಬರಲು ಹದಿನೈದು ನಿಮಿಷವಾಯಿತು.

"ಏನು, ಪೆದ್ದಣ್ಣಾ, ವಿಷಯ!" ಕೇಳಿದ ರಾಜ.

ಎ. ಸುಬ್ಬಲಕ್ಷ್ಮಿ - ಕಂದಾಪುರ



"ವೇಷ ಕಟ್ಟುವವರಂತೆ. ಜನ ಅವರ ಸುತ್ತೂ ಸೇರಿ ಅದೂಇದೂ ಮಾತಾಡ್ತಿದ್ದಾರೆ" ಎಂದ ಪೆದ್ದಣ್ಣ.

"ಯಾವ ಊರಿಂದ ಬಂದಿದ್ದಾರೆ ಈ ವೇಷ ಕಟ್ಟುವವರು?" ಎಂದು ಕೇಳಲು, ಏನು ಉತ್ತರ ಕೊಡಬೇಕೋ ಪೆದ್ದಣ್ಣನಿಗೆ ತಿಳಿಯದಾಯಿತು. ನದಿದಡಕ್ಕೆ ಹೋದಾಗ ಅವನು ಈ ವಿಷಯ ಕೇಳಿ ತಿಳಿದುಕೊಳ್ಳಲಿಲ್ಲ. "ಹೋಗಿ ತಿಳಿದುಕೊಂಡು ಬರುತ್ತೇನೆ" ಎಂದು ಮತ್ತೆ ಹೋಗಿ ಕಾಲು ಗಂಟೆಯಾದ ತರುವಾಯ ಹಿಂತಿರುಗಿದ.

"ವೇಷ ಕಟ್ಟುವವರು ಕೂಚಿಪುಡಿಯಿಂದ ಬಂದಿರುವರಂತೆ ಎಂದ.

ಈ ಉತ್ತರ ಕೇಳಿ ರಾಜ ಸುಮ್ಮನಿರಲಿಲ್ಲ. "ಓಹೋ ಕೂಚಿಪುಡಿ ಭಾಗವತರೋ ಅವರು? ಹಾಗಾದರೆ ಆಸ್ಥಾನಕ್ಕೆ ಕರೆಯಿಸಬೇಕು. ಸರಿ, ಪೆದ್ದಣ್ಣ, ಇವರು ನಮ್ಮ ಪಟ್ಟಣದಲ್ಲಿ ಎಷ್ಟು ದಿನ ವಿರ್ತಾರಂತೆ?" ಎಂದು ಕೇಳಿದ ರಾಜ.

ಆದರೆ ಆ ವಿಷಯ ಪೆದ್ದಣ್ಣನಿಗೇನು ಗೊತ್ತು? ಅವರನ್ನು ಇದನ್ನು ಕೇಳಲೂ ಇಲ್ಲ; "ತಾಳಿ, ಮಹಾಸ್ವಾಮಿ. ಆ ವಿಷಯ ಸಹಾ ಕೇಳಿಕೊಂಡು ಬರ್ತೇನೆ" ಎಂದು ಮತ್ತೆ ನದಿದಡಕ್ಕೆ ಓಡಿದ. ಮತ್ತೆ ಅಲ್ಲಿಂದ ಬರಲು ಕಾಲು ಗಂಟೆಗಿಂತಲೂ ಹೆಚ್ಚು ಸಮಯ ಹಿಡಿಯಿತು.

"ಎಂಟು ಹತ್ತು ದಿವಸ ಇರ್ತಾರಂತೆ ಸ್ವಾಮಿ" ಎಂದು ಹೇಳಿದ.

"ಹಾಗಾದರೆ ನಾವು ಬೇಟೆ ಮುಗಿಸಿಕೊಂಡು ಬರುವವರೆವಿಗೂ ಇರ್ತಾರೆ ಅಂತ ಆಯಿತು. ಸರಿ, ಅವರು ಯಾವುದಾದರೂ ನೂತನ ನಾಟಕ, ವೇಷ ಕಟ್ಟೋದು ಕಲಿತಿದಾರೆಯೋ, ಇಲ್ಲ ನಾವೀಗಾಗಲೇ ನೋಡಿರುವಂತಹದೇಯೋ?" ಎಂದು ಮತ್ತೆ ಕೇಳಿದ ರಾಜ.

ಈ ವಿಷಯ ಪೆದ್ದಣ್ಣನಿಗೆ ಹೇಗೆ ತಿಳಿಯುತ್ತೆ? ತಿಳಿದುಕೊಳ್ಳಬೇಕೆಂದರೆ ದೇವರೇ ಅಂತ ಮತ್ತೆ ನದಿದಡಕ್ಕೆ ಹೋಗಿಬಿಟ್ಟು ಬರಬೇಕು. "ಅಪ್ಪಣೆಯಾದರೆ ತಿಳಿದುಕೊಂಡು ಬರ್ತೇನೆ" ಎಂದ ಪೆದ್ದಣ್ಣ ಸ್ವಲ್ಪ ಬೇಸರದಿಂದ.

"ಅಗತ್ಯವಾಗಿ ತಿಳಿದುಕೊಳ್ಳ ಬೇಕಾದ ವಿಷಯ, ಪೆದ್ದಣ್ಣ, ಯಾಕೆಂದರೆ ಅವರು

ಹೊಸ ನಾಟಕಗಳನ್ನು ಕಲಿತಿಲ್ಲದಿದ್ದರೆ ಅವರನ್ನು ಆಸ್ಥಾನಕ್ಕೆ ಕರೆಯಿಸಬೇಕಾಗಿಯೇ ಇಲ್ಲ." ಎಂದ ರಾಜ.

"ಅಪ್ಪಣೆ, ಹೋಗಿ ಬರ್ತೀನೆ, ಹಾಗಾದರೆ" ಎಂದು ಓಡಿಹೋದ ಪೆದ್ದಣ್ಣ.

ಪೆದ್ದಣ್ಣ ಹಿಂತಿರುಗಲು ಮತ್ತೆ ಅರ್ಧಗಂಟೆ ಆಯಿತು. ನಾಲ್ಕು ಸಾರಿ ಹೋಗಿ ಬರುವುದಕ್ಕೆ ಒಟ್ಟು ಒಂದು ಗಂಟೆಗಿಂತಲೂ ಹೆಚ್ಚು ಕಾಲ ವ್ಯಯವಾಯಿತು. ಪ್ರತಿಸಾರಿ ಎರಡೆರಡು ಫರ್ಲಾಂಗ್ ಹೋಗಿ ಬರುವುದು ಅಂದರೆ ಒಟ್ಟು ಎರಡು ಮೈಲು ಓಡಿದುದರಿಂದ ಪೆದ್ದಣ್ಣನ ಮೈಯೆಲ್ಲಾ ಬೆವತು ಸುಸ್ತಾಗಿಬಿಟ್ಟ. ಕುಂಟುತ್ತಾ, ಕೊರಗುತ್ತಾ ಹಿಂತಿರುಗಿ ಬಂದ ಪೆದ್ದಣ್ಣ "ಪ್ರಭೂ, ಹೊಸನಾಟಕ, ಹೊಸ ವೇಷ ಹಾಕೋದು ಎಷ್ಟೋ ಕಲಿತವರಂತೆ" ಎಂದ.

"ಇನ್ನೇನು ಹಾಗಾದರೆ. ನಾಟಕಗಳನ್ನೂ, ವೇಷಗಳನ್ನೂ ತಪ್ಪದೆ ಹಾಕಿಸೋಣ. ಈ ವಿಷಯ ಅವರಿಗೆ ಹೇಳಿಬಂದೆಯಾ?" ಎಂದು ಪ್ರಶ್ನೆ ಮಾಡಿದ ರಾಜ ಮತ್ತೆ.

"ಯಾವ ವಿಷಯ ಪ್ರಭೂ?" ಎಂದ ಪೆದ್ದಣ್ಣ, ಎಲ್ಲಿ ಮತ್ತೆ ಹೋಗಿಬಿಟ್ಟು ಬರಬೇಕಾಗುತ್ತೋ ದೇವರೇ ಅಂತ.

"ಅವರು ನಮ್ಮ ಪಟ್ಟಣಬಿಟ್ಟು ಹೊರಡುವ ಮುನ್ನ ನಮ್ಮ ದರ್ಶನಪಡೆದು, ಆಸ್ಥಾನದಲ್ಲಿ ತಮ್ಮ ಪ್ರಾವೀಣ್ಯತೆಯನ್ನು ಪ್ರದರ್ಶಿಸಬೇಕೆಂಬ ವಿಷಯ" ಎಂದ ರಾಜ.



ತಮ್ಮ ಅಪ್ಪಣೆಯಿಲ್ಲದೆ ಹೇಗೆ ಹೇಳಲಿ, ಪ್ರಭೂ" ಎಂದ ಪೆದ್ದಣ್ಣ.

"ಮಿಂಚಿಹೋದುದೇನೂ ಇಲ್ಲ. ಈಗಲೂ ಹೋಗಿ ಹೇಳಿ ಬರಬಹುದು" ಎಂದರಾಜ.

ರಾಜ ತನ್ನನ್ನು ಮತ್ತೆ ನದಿದಡಕ್ಕೆ ಓಡಿಸುವನೆಂಬ ವಿಷಯ ಕೇಳಿದಕೂಡಲೇ ಪೆದ್ದಣ್ಣನ ಮನಸ್ಸು ರೋಸಿಹೋಯಿತು. "ಇದೇನಿದು ಇಂದು ಮಹಾರಾಜರು ಹೀಗೆ ಪೀಡಿಸಿಕೊಂಡು ತಿನ್ನುತ್ತಿದ್ದಾರೆ. ಇದುವರೆವಿಗೂ ಎಂದೂ ನನಗೆ ಇಂತಹ ಅವಸ್ಥೆ ಬರಲಿಲ್ಲ. ಬೀಸಣಿಗೆ ಹಿಡಿದುಕೊಂಡು ಬೀಸುವುದು, ಹಾಸಿಗೆ ಹಾಸುವುದು, ಬಟ್ಟೆ ಮಡಿ ಮಾಡಿಕೊಡುವುದು ಇಂತಹ ಕೆಲಸಗಳೆಷ್ಟೋ ಮಾಡುತ್ತಿದ್ದೇನೆ. ಆದರೆ ಎಂದೂ ಇಷ್ಟು ಆಯಾಸಪಡಲಿಲ್ಲ. ಒಂದು ಕೆಲಸಕ್ಕೆ ಇಷ್ಟು

ಸಾರಿ ಓಡಿಹೋಗೋದೇ! ಎಂದು ಅನ್ನಿಸಿತು ಪೆದ್ದಣ್ಣನಿಗೆ.

ಆ ಸಮಯಕ್ಕೆ ಸರಿಯಾಗಿ ಮಂತ್ರಿ ಅಲ್ಲಿಗೆ ಬಂದ. ರಾಜನು ಮಂತ್ರಿಗೆ ನದಿದಡಮೇಲಿದ್ದ ಜನರನ್ನು ತೋರಿಸಿ ವಿಷಯವೇನೋ ತಿಳಿದು ಕೊಂಡು ಬರುವಂತೆ ಹೇಳಿದ.

ಮತ್ತೆ ಕೆಲ ಹೊತ್ತಿಗೆಲ್ಲಾ ಮಂತ್ರಿ ನದಿ ದಡದಿಂದ ಮರಳಿಬಂದು "ಪ್ರಭೂ, ಕೂಚಿ ಪುಡಿಯಿಂದ ಭಾಗವತರು ಬಂದಿದ್ದಾರೆ. ಅವರು ಹೇಳುತ್ತಿರುವ ತಮಾಷೆ ಮಾತುಗಳನ್ನು ಕೇಳುತ್ತಾ ಜನ ನೆರೆದಿದ್ದಾರೆ. ಮಹಾಸ್ವಾಮಿ, ಈ ಭಾಗವತರು ನಮ್ಮ ಊರಿನಲ್ಲಿ ಹತ್ತು ದಿನ ವಿರುತ್ತಾರಂತೆ. ಬಹಳ ಬಹಳ ಹೊಸನಾಟಕ ಗಳನ್ನೂ, ವೇಷ ಹಾಕುವುದನ್ನೂ ಕಲಿತಿದ್ದೇವೆ ಎಂದರವರು. 'ನಮ್ಮ ಪ್ರಭುಗಳು ಸಾಳಿಗೆ ಬೇಟೆಗೆ ಹೋಗುವರು. ಎರಡು ಮೂರು ದಿನಗಳಲ್ಲಿ ಹಿಂತಿರುಗುತ್ತಾರೆ. ಆಗ ನೀವು ಬಂದು ಪ್ರಭುಗಳ ದರ್ಶನ ಮಾಡಿಕೊಳ್ಳಿ' ಎಂದು ಭಾಗವತರೊಂದಿಗೆ ಹೇಳಿಬಿಟ್ಟು ಬಂದೆ. ಪುರಸತ್ತು ಆದಾಗ ಪ್ರಭುಗಳು ಅವರ ಪ್ರದರ್ಶನ ನೋಡಬಹುದು' ಎಂದು ರಾಜನಿಗೆ ಮಂತ್ರಿ ಮನವಿ ಮಾಡಿಕೊಂಡ.

ರಾಜನು ಮಂತ್ರಿಗೆ ಅಪ್ಪಣೆ ಕೊಟ್ಟು ಕಳುಹಿಸಿ "ಪೆದ್ದಣ್ಣಾ, ನೋಡಿದೆಯಾ? ವಿಷಯ ವೇನು ತಿಳಿದುಕೊಂಡು ಬಾ ಎಂದು ಹೇಳಿದರೆ ಮಂತ್ರಿ ಹೋಗಿ ಒಂದೇಸಾರಿ ಎಷ್ಟು ವಿವರಗಳನ್ನೂ ತಿಳಿದುಕೊಂಡು ಬಂದ. ಇಷ್ಟು ವಿವರಗಳನ್ನು ತಿಳಿದುಕೊಳ್ಳ ಬೇಕೆಂದು ನಿನಗೆ ಹೊಳೆಯಲಿಲ್ಲ. ನಾನು ಪ್ರತಿ ಯೊಂದನ್ನೂ ಕೇಳುತ್ತಿರುವುದು ನೀನು ಪುನಃ ಪುನಃ ಹೋಗಿ ಬರುತ್ತಿರುವುದೂ ಇದರಲ್ಲೇ ಕಾಲ ಕಳೆದುಹೋಯಿತು. ತಿಳಿದುಕೊಳ್ಳ ಬಹುದಾದ ವಿಷಯಗಳನ್ನು ಅರಿತುಕೊಂಡು ಬಂದದ್ದು ಮಾತ್ರವಲ್ಲದೆ ಮಂತ್ರಿ ಅವರನ್ನು ಆಹ್ವಾನಿಸಿಯೂ ಬಿಟ್ಟ. ಆಹ್ವಾನಿಸಿದನೇ ಹೊರತು 'ನೀವು ನಾಟಕ ಆಡಿ, ಮಹಾ ರಾಜರು ನೋಡ್ತಾರೆ' ಎಂದು ಅವರಿಗೆ ಯಾವವಿಧವಾದ ಭರವಸೆಯನ್ನೂ ಕೊಡ ಲಿಲ್ಲ. ನಿನಗೂ ಮಂತ್ರಿಗೂ ಇರುವ ಬೇಧ ಈಗಲಾದರೂ ತಿಳಿಯಿತೇ!" ಎಂದು ಕೇಳಿದ ರಾಜ. ಮಡಿವಾಳ ತನ್ನ ಅಜ್ಞಾನಕ್ಕೆ ನಾಚಿ ಕೊಂಡು ತಲೆ ತಗ್ಗಿಸಿದ.






ಕುಂದೇರು ಎಂಬ ಗ್ರಾಮದಲ್ಲಿ ವೆಂಕಪ್ಪಶಾಸ್ತ್ರಿ ಅಂತ ಒಬ್ಬ ಬ್ರಾಹ್ಮಣನಿದ್ದ. ಆತನು ಮಹಾ ಅನ್ನದಾತನೆಂದು ಹೆಸರು ಗಳಿಸಿದ್ದ. ಈ ಕೀರ್ತಿಗೆಲ್ಲಾ ಕಾರಣ ಆತನ ಹೆಂಡತಿ ಕಾಮೇಶ್ವರಮ್ಮ. ಆಕೆ ಕಾಶಿ ಅನ್ನಪೂರ್ಣೆಯಂತೆ. ಬೇಸರ ಗೊಣಗಾಟಗಳಿಲ್ಲದೆ ಎಷ್ಟು ಜನಕ್ಕಾದರೂ ಅಡಿಗೆ ಮಾಡಿ ಬಡಿಸುತ್ತಿದ್ದಳು. ಆ ದಂಪತಿಗಳಿಗೆ ಸೋಮಪ್ಪಶಾಸ್ತ್ರಿ ಎಂಬ ಮಗನಿದ್ದ. ಸೋಮಪ್ಪನಿಗೆ ಸರಸ್ವತಿ ಎಂಬ ಹುಡುಗಿಯನ್ನು ತಂದು ಮದುವೆಮಾಡಿದರು.

ಸೊಸೆ ಮನೆಗೆ ಬಂದ ಹೊಸದರಲ್ಲಿ ಕಾಮೇಶ್ವರಮ್ಮ ತಮ್ಮ ತಮ್ಮನ ಮನೆ ಹೆರಿಗೆಗೆ ತೌರುಮನೆಗೆ ಹೋಗಬೇಕಾಗಿ ಬಂತು. ಊರು ಬಿಡುವ ಮುಂಚೆ ಆಕೆ ಸೊಸೆಯೊಂದಿಗೆ "ಮನೆಗೆ ಬಂದ ಅತಿಥಿಗೆ ಶ್ರದ್ಧೆಯಿಂದ ಊಟ ಬಡಿಸಬೇಕು ತಾಯಿ. ಬಡಿಸಿದ ತರುವಾಯ ಬೇಕಾದುದನ್ನು ಅವರೇ ಕೇಳುವರೆಂದು ಸುಮ್ಮನಿರಕೂಡದು. ಬಡಿಸಿದ ಪದಾರ್ಥಗಳಲ್ಲಿ ಯಾವ ಪದಾರ್ಥವನ್ನು ಅವರು ಖುಷಿಯಾಗಿ ತಿನ್ನುವರೋ ಕಂಡುಹಿಡಿದು ಆ ಪದಾರ್ಥವನ್ನು ಎರಡು ಮೂರು ಸಾರಿ ಮತ್ತೆ ಬಡಿಸಬೇಕು. ದಾಕ್ಷಿಣ್ಯಕ್ಕಾಗಿ ಅವರು ಬೇಡಾ ಅಂತಾರೆ. ಬೇಡಾ ಅಂತ ಹೇಳಿದರಲ್ಲಾ ಎಂದು ಸುಮ್ಮನೆ ಇದ್ದುಬಿಡಕೂಡದು. ಅವರಿಗೆ ಪೂರ್ತಿ ತೃಪ್ತಿಯಾಗುವಂತೆ ನೋಡಬೇಕು ;" ಎಂದು ಮತ್ತೆ ಮತ್ತೆ ಹೇಳಿಬಿಟ್ಟು ಹೋದರು.

ವೆಂಕಪ್ಪಶಾಸ್ತ್ರಿ ಕಾಮೇಶ್ವರಮ್ಮ ಇಬ್ಬರೂ ಊರಿಗೆ ಹೊರಟ ಮಾರನೆಯ ದಿನವೇ ನೀಲಸಂದ್ರದಿಂದ ನೀಲಕಂಠಯ್ಯ ವೆಂಕಪ್ಪಶಾಸ್ತ್ರಿಗಳ ಮನೆಕಡೆ ಬಂದ. ಜಗಲಿಯಮೇಲೆ ಕುಳಿತು ಜನಿವಾರ ಹೊಸೆಯುತ್ತಿದ್ದ ಸೋಮಪ್ಪಶಾಸ್ತ್ರಿಯನ್ನು ಕಂಡ. "ಅಪ್ಪಾ, ನನಗಿಂದು ಊಟ ಎಲ್ಲಿ ಸಿಗಬಹುದೆಂತ ಈ ಊರಲ್ಲಿ ವಿಚಾರಿಸಲು ಯಾರೋ ಈ ಮನೆ ತೋರಿಸಿದರು. ಹಸಿದ ಬ್ರಾಹ್ಮಣ ಬಂದಿದ್ದೇನೆ" ಎಂದು ಹೇಳಿದ ನೀಲಕಂಠಯ್ಯ.

ಹಿರಿಯರ ಪದ್ಧತಿಯನ್ನು ಮಗ ಸೋಮಪ್ಪ ತಪ್ಪಿಸಲಿಲ್ಲ. ಕೂಡಲೇ ಎದ್ದು "ದಯ ಮಾಡಿಸಬೇಕು ಅಡಿಗೆ ಆಲಸ್ಯವಾಗುವುದಿಲ್ಲ'' ಎಂದು ಅತಿಥಿಯನ್ನು ಬಾವಿಯ ಹತ್ತಿರಕ್ಕೆ ಕರೆದುಕೊಂಡು ಹೋಗಿ

ಕಮಲಪ್ರಿಯ, ಮದರಾಸು,



ಎಲ್ಲಾ ಅನುಕೂಲತೆಗಳನ್ನೂ ಮಾಡಿ ಕೊಟ್ಟ. ನೀಲಕಂಠಯ್ಯ ಸ್ನಾನ ಮಾಡಿ, ಒದ್ದೆ ಒಟ್ಟೆ ಹಿಂಡಿ ಉಟ್ಟುಕೊಂಡು ಆಗಲೇ ಊಟಕ್ಕಾಗಿ ಹಾಕಿದ್ದ ಎಲೆಮುಂದೆ ಮಣೆಮೇಲೆ ಕುಳಿತು, ಮುಖ, ಎದೆ, ಭುಜಗಳಮೇಲೆ ವಿಭೂತಿಯನ್ನು ಪಟ್ಟೆ ಪಟ್ಟೆಯಾಗಿ ಬಳಿದು "ಮಗೂ, ಇನ್ನು ಬಡಿಸಬಹುದು" ಎಂದ.

ಅಂದು ಸರಸತಿ ದಂಟಿನ ಪಲ್ಯೆ ಮಾಡಿದ್ದಳು. ಕುಂಬಳಕಾಯಿ, ಗೆಣಸು, ಬದನೆಕಾಯಿ, ನುಗ್ಗೆಕಾಯಿ, ಇಷ್ಟನ್ನೂ ಹಾಕಿ ಭರ್ಜರಿಯಾಗಿ ಹುಳಿ ಮಾಡಿದ್ದಳು. ಇದರೊಂದಿಗೆ ತೆಂಗಿನಕಾಯಿ ಚಟ್ನಿ ಬೇರೆ. ಅನ್ನ ಬಡಿಸಿ ತುಪ್ಪ ಹಾಕಿದ ತರುವಾಯ ನೀಲಕಂಠಯ್ಯ ಪರಿಷೇಚನೆ ಮಾಡಿ ಪದಾರ್ಥ ಕಲಸಿಕೊಂಡ. ಸರಸ್ವತಿ ಹುಳಿಯನ್ನು 5-6



ಸಾಟು ಬಡಿಸಿ ಅತ್ತೆ ಹೇಳಿದ ಮಾತುಗಳನ್ನೇ ನೆನೆಸಿಕೊಂಡು ಆ ಪ್ರಕಾರ ನೀಲಕಂಠಯ್ಯ ಯಾವ ಯಾವ ಪದಾರ್ಥ ಖುಷಿಯಾಗಿ ತಿನ್ನುತ್ತಿರುವನೋ ಎಂದು ಜಾಗರೂಕತೆಯಿಂದ ನೋಡುತ್ತಾ ನಿಂತಿದ್ದಳು.

ನೀಲಕಂಠಯ್ಯನಿಗೆ ಎರಡು ನಿಯಮಗಳಿವೆ. ಊಟ ಮಾಡುತ್ತಿರುವ ಸಮಯದಲ್ಲಿ ಮಾತನಾಡದಿರುವುದು ಒಂದು. ಎರಡನೆಯದು, ಎಲೆಯಲ್ಲಿ ಬಡಿಸಿದ ಪದಾರ್ಥ ಏನೇ ಆಗಲೀ ಒಂದು ಚೂರನ್ನೂ ಬಿಸಾಡದೆ ಊಟ ಮಾಡುವುದು; ಈ ಎರಡು ನಿಯಮಗಳೂ ತುಂಬಾ ಸೊಗಸಾದುವು. ಊಟ ಮಾಡುವಾಗ ಬೇರೊಂದು ಯೋಚನೆಯಿಲ್ಲದೆ ಊಟ ಮಾಡುವುದು ಆರೋಗ್ಯಕರವೆಂದು ವೈದ್ಯ ಶಾಸ್ತ್ರದಲ್ಲೇ ಹೇಳಿದ್ದಾರೆ. ಹಾಗಲ್ಲದೆ ಊಟ ಮಾಡುವಷ್ಟು ಹೊತ್ತೂ ವಟ ವಟನೆಂದು ಮಾತನಾಡುತ್ತಿದ್ದರೆ ನೆತ್ತಿಗೇರುವುದೂ ಬಿಕ್ಕಳಿಕೆ ಬರುವುದೂ ಸರ್ವಸಾಮಾನ್ಯ. ಇನ್ನು ಎಲೆಯಲ್ಲಿ ಬಡಿಸಿದುದನ್ನು ಬಿಸಾಡದೆ ಊಟ ಮಾಡುವುದು ತುಂಬಾ ಒಳ್ಳೆಯ ನಿಯಮ. ಕೆಲವರ ಎಲೆಗಳಲ್ಲಿ ತಿಂದ ಪದಾರ್ಥಗಳಿಗಿಂತಲೂ ಬಿಸಾಡಿರುವ ಪದಾರ್ಥಗಳೇ ಹೆಚ್ಚಾಗಿರುತ್ತವೆ. ಸಾಕಷ್ಟು ಹಾಕಿಸಿಕೊಂಡು ಭುಜಿಸುವುದು ಒಳ್ಳೆಯ ಕಾರ್ಯವಲ್ಲವೆಂದು ಯಾರುತಾನೇ ಹೇಳುವರು?

ಈ ಎರಡು ನಿಯಮಗಳನ್ನು ಅವನ ತಂದೆ ಹೇಳಿದ ಪ್ರಕಾರ ನೀಲಕಂಠಯ್ಯ ಪಾಲಿ



ಹುತ್ತಲೇ ಇದ್ದ. ಆದರೆ ಅದನ್ನು ಏಕೆ ಆರೀತಿ ಏರ್ಪಡಿಸಿವರೆಂಬುದನ್ನು ಕುರಿತು ಆತನು ಯೋಚಿಸಲೇ ಇಲ್ಲ. ಊಟದ ಸಮಯದಲ್ಲಿ ತಂದೆ ಮಾತನಾಡಬೇಡವೆಂದು ಹೇಳಿದ್ದ ರಿಂದ, ಪರಿಷೇಚನೆ ಮಾಡಿದ ಮೊದಲು ಗೊಂಡು ಉತ್ತರಾಪೋಶನ ತೆಗೆದುಕೊಳ್ಳುವ ವರೆವಿಗೂ ಒಂದು ಶಬ್ದವೂ ಮಾಡದೆ ಮೌನ ವಾಗಿರುತ್ತಿದ್ದ. ತಂದೆ ಎಲೆಯಲ್ಲಿ ಬಡಿಸಿದ್ದು ಒಂದು ಚೂರೂ ಬಿಸಾಡಕೂಡದೆಂದನಾದು ದರಿಂದ ಪದಾರ್ಥಗಳಲ್ಲಿ ಅಪ್ಪಿತಪ್ಪಿ ಇದ್ದಿಲು, ಕಲ್ಲೂ, ಮಣ್ಣು ಇತ್ಯಾದಿಗಳನ್ನೂ ಸಹ ವರ್ಜಿಸದೆ ಅವುಗಳನ್ನೂ ಸಹ ನುಂಗಿಬಿಡು ತ್ತಿದ್ದ. ಆತನ ತಿಳಿಗೇಡಿತನ ಕಂಡು, ಆತನ ಹೆಂಡತಿ ಇದ್ದಿಲು, ಕಲ್ಲು, ಮುಂತಾದುದೇನೂ ಇಲ್ಲದಂತೆ ಜಾಗರೂಕತೆಯಿಂದ ನೋಡಿ, ನೋಡಿ ಬಡಿಸುವಳು. ಅಷ್ಟೇ ಅಲ್ಲ, ಪದಾರ್ಥ ಗಳಿಗೆ ಒಗ್ಗರಣೆಗಾಗಿ ಹಾಕಿದ ಮೆಣಸಿನ ಕಾಯಿಯನ್ನೂ ಸಹ ಆರಿಸಿ ತೆಗೆದುಬಿಡುವಳು. ನುಗ್ಗೆಕಾಯಿಯಂತಹವು ಬಡಿಸಿದರೆ ಸಾರ ಮಾತ್ರ ತಿಂದು ಹಿಪ್ಪೆ ಬಿಸಾಡದೆ ಹಿಪ್ಪೆಸಹ ನುಂಗಿಬಿಡುತ್ತಿದ್ದುದರಿಂದ ಆ ತರಕಾರಿಹೆಚ್ಚು ಬಳಸುತ್ತಲೇ ಇರಲಿಲ್ಲ. ನುಗ್ಗೇಕಾಯಿಯ ಹೋಳುಗಳನ್ನು ತೆಗೆದುಹಾಕಿ ಬಡಿಸುತ್ತಿ ದ್ದಳು. ಈ ವಿಧವಾಗಿ ಆಕೆ ತನ್ನ ತಿಳುವಳಿಕೆ ಯಿಂದ, ಊಟವಿಕ್ಕುವಾಗ ಆತನಿಗೆ ಯಾವುದೇ ವಿಧವಾದ ಕಷ್ಟವುಂಟಾಗದಂತೆ ನೋಡಿ ಕೊಳ್ಳುತ್ತಿದ್ದಳು.



ಸದಾ ಮನೆಯಲ್ಲೇ ಕುಳಿತಿದ್ದರೆ ಆಗು ತ್ತದೆಯೆ, ಗಂಡಸಿಗೆ? ಒಂದುಸಾರಿ ನೆರೆ ಯೂರಿಗೆ ಹೋಗಬೇಕಾಗಿ ಬಂತು ನೀಲ ಕಂಠಯ್ಯನವರಿಗೆ. ಅವಕ್ಕೆಂತಲೇ ಆತ ಕು ದೇರಿಗೆ ಬಂದು ವೆಂಕಪ್ಪನ ಮನೆಯಲ್ಲಿ ಇಳಿದ ಊಟಕ್ಕೆ. ಊಟ ಪ್ರಾರಂಭಿಸುವ ಮುನ್ನ ಆತನು ಸರಸ್ವತಿಗೆ "ತಾಯಿ, ನನಗೆ ಇಂತಹ ನಿಯಮಗಳಿವೆ" ಎಂದು ಹೇಳಿದ್ದರೆ ತಂಟೆ ಯಿರುತ್ತಿರಲಿಲ್ಲ. ಆದರೆ ಮೊದಲು ಅದನ್ನು ತಿಳಿಸುವ ಅಗತ್ಯ ನೀಲಕಂಠಯ್ಯನಿಗೆ ಕಾಣ ಲಿಲ್ಲ. ನೀಲಕಂಠಯ್ಯನ ವಿಷಯವಾಗಲೀ, ಆತನ ನಿಯಮವಾಗಲೀ ತಿಳಿಯದ ಸರಸ್ವತಿ ಪದಾರ್ಥಗಳನ್ನು ಬಡಿಸಿ ನೋಡುತ್ತಾ ನಿಂತಿದ್ದಳು. ದಂಟು ಬಲಿತಿದ್ದುದರಿಂದ ಅಗಿ ದಾಗ ನಾರು ನಾರಾಗಿ ಹಿಪ್ಪೆ ಉಳಿಯುತ್ತಿತ್ತು.



ನೀಲಕಂಠಯ್ಯ ಮಾತನಾಡಲಾರದೆ ಏನೂ ಹೇಳದೆ ಹೇಗೋ ಒಂದುರೀತಿ ಅತಿಪ್ರಯಾಸದಿಂದ ದಂಟಿನ ಹಿಪ್ಪೆ, ಮೆಣಸಿನಕಾಯಿ ಎಲ್ಲವನ್ನೂ ನುಂಗಿಬಿಟ್ಟನೇ ಹೊರತು ನಿಯಮವನ್ನು ಮಾತ್ರ ಬಿಡಲಿಲ್ಲ.

ನೀಲಕಂಠಯ್ಯನ ಮೂರ್ಖತೆಗೆ ಈಗ ಸರಸ್ವತಿಯ ಅಮಾಯಕತೆ (ಮುಗ್ಧತೆ) ಜೊತೆಗೂಡಿತು. ಆತನು ದಂಟಿನ ಹಿಪ್ಪೆ ಸಹ ಬಿಡದೆ ನುಂಗಿಬಿಟ್ಟುದನ್ನು ಕಂಡು ಆತನಿಗೆ ದಂಟು ತುಂಬಾ ಇಷ್ಟಅಂತ ಅಂದುಕೊಂಡಳು. ಲಗುಬಗನೆ ಒಳಗೆಹೋಗಿ ಉಳಿದಿದ್ದ ದಂಟನ್ನೆಲ್ಲಾ ಆರಿಸಿ ತಂದು ನೀಲಕಂಠಯ್ಯನನ್ನು ಕೇಳದೆ ಮಾಡದೇ ಆತನ ಎಲೆಯಲ್ಲಿ ಹಾಕಿಬಿಟ್ಟಳು.

ಆತ ದಿಗ್ಭ್ರಮೆಗೊಂಡ. ಏನು ಮಾಡುವುದು? ನಿಯಮ; ಮಾತನಾಡುವುದಕ್ಕಿಲ್ಲ. ಆಕೆ ನೀಲಕಂಠಯ್ಯನ ಮುಖಭಾವ ನೋಡಿ ಅದು ದಾಕ್ಷಿಣ್ಯಕ್ಕಾಗಿ ಅಂತ ತಿಳಿದುಕೊಂಡಳು. "ಪರವಾಗಿಲ್ಲ, ಸ್ವಲ್ಪತಾನೇ ಹಾಕಿದೆ. ಊಟ ಮಾಡಿ" ಎಂದಳು. ಸಂಕಟಪಡುತ್ತಾ, ದಿಕ್ಕು ದಿಕ್ಕು ನೋಡುತ್ತಾ ಒಂದೊಂದು ದಂಟಾಗಿ ತೆಗೆದುಕೊಂಡು ಪ್ರಯಾಸದಿಂದ ಹೊಟ್ಟೆಗೆ ತುರುಕಿಬಿಟ್ಟ ನೀಲಕಂಠಯ್ಯ.

ಎರಡನೇಸಾರಿ ಬಡಿಸಿದ ದಂಟನ್ನೂ ಸಹ ಆತ ತಿಂದು ಬಿಟ್ಟಿರುವುದನ್ನು ನೋಡಿ ಸರಸ್ವತಿ ಮತ್ತೆ ಒಳಗಿಂದ ದಂಟಿನ ಪಾತ್ರೆ ತಂದಳು. ಅದನ್ನು ಗ್ರಹಿಸಿ ನೀಲಕಂಠಯ್ಯ ಬೆಚ್ಚಿಬಿದ್ದ. ಆಕೆ ಎಲೆಯ ಹತ್ತಿರ ಬರುವ ಮೊದಲೇ ಕೈ ಮತ್ತು ತಲೆಯನ್ನೂ ಎಲೆಗೆ ಅಡ್ಡಮಾಡಿ "ಬೇಡ" ವೆಂದು ತಿಳಿಸುವ ಸಲುವಾಗಿ ಐದು ನಿಮಿಷ ತಲೆ ಆಡಿಸುತ್ತಾ ಇದ್ದುಬಿಟ್ಟ. ಆಗ ತಿಳಿದು ಕೊಂಡಳು ಸರಸ್ವತಿ—ನಿಜವಾಗಿ ಆತನು ದಾಕ್ಷಿಣ್ಯಕ್ಕೆ ಹೇಳುತ್ತಿಲ್ಲವೆಂದು!

ದಂಟು ನುಂಗಿದಾಗಲೆಲ್ಲಾ ಗಂಟಲಲ್ಲಿ ಇಳಿಯದೆ ನೀಲಕಂಠಯ್ಯ ಪದೇ ಪದೇ ನೀರು ಕುಡಿಯ ಬೇಕಾಗುತಿತ್ತು. ಅದರಿಂದಾಗಿ ಹೊಟ್ಟೆ ಭಾರವಾಯಿತು. ಮೊದಲುಬಡಿಸಿದ ಅನ್ನ ಇನ್ನೂ ಮಿಕ್ಕಿತ್ತು. ಹುಳಿಯಲ್ಲಿದ್ದ ತರಕಾರಿ, ಚಟ್ನಿಎಲ್ಲಾ 'ನಮ್ಮ ವಿಷಯವೇನು ರಾಯ್ರೇ' ಎಂದು ಪ್ರಶ್ನೆಮಾಡುವರೀತಿಯಲ್ಲಿ ಎಲೆಯಲ್ಲಿದ್ದುವು. ಎಷ್ಟು ಹೊತ್ತಾದರೂ ಸರಿಯೇ, ಹೇಗಾದರೂ ಎಲ್ಲವನ್ನೂ ತಿಂದು ಮುಗಿಸಿ ತನ್ನ ನಿಯಮ ಪಾಲಿಸಿಕೊಳ್ಳ

ಬೇಕೆಂದುಕೊಂಡ ನೀಲಕಂಠಯ್ಯ. ಆದರೆ ಎಲೆಯಲ್ಲಿದ್ದ ತರಕಾರಿಯ ರಾಶಿಯಲ್ಲಿ ನಾಲ್ಕು ನುಗ್ಗೇಕಾಯಿ ಕಾಣಿಸಿತು. ಮೊದಲು ಅದನ್ನು ಮುಗಿಸಿಬಿಡೋಣ ವೆಂದು ಹಿಪ್ಪೆಯೊಂದಿಗೆ ನುಗ್ಗೇಕಾಯಿ ತಿಂದು ಬಿಟ್ಟ.

ತರುವಾಯ ಚಟ್ನಿಯಿಂದ ಕಲಿಸಿಕೊಳ್ಳೋಣವೆಂತ ಅನ್ನಮುಂದಕ್ಕೆ ಎಳೆದುಕೊಂಡ. ಆಗ ಸರಸ್ವತಿ ಹುಳಿಯ ಪಾತ್ರೆ ಹಿಡಿದುಕೊಂಡು ಬಂದಳು. ಮೂರು ಸವುಟು ಹುಳಿ ಬಡಿಸಿ 'ಇನ್ನೊಂದು ಸವುಟುಹಾಕಲೇ' ಎಂದು ಕೇಳಿದಳು. ಎಲೆಯಲ್ಲಿ ಬಿದ್ದ ಮೂರು ರಾಶಿ ನುಗ್ಗೇಕಾಯಿ ನೋಡಲು, ನೀಲಕಂಠಯ್ಯನ ಕಣ್ಣಿನಲ್ಲಿ ನೀರು ಬಂತು. ಏನು ಮಾಡಲೂ ತೋರದೆ ಎಡಗೈಯಿಂದ 'ರಪರಪಾ' ಅಂತ ತಲೆ ಚಚ್ಚಿಕೊಳ್ಳಲು ಪ್ರಾರಂಭಿಸಿದ. ಅಷ್ಟರವರೆವಿಗೂ ತಲೆ ಎತ್ತದೆ ಊಟ ಮಾಡುತ್ತಿದ್ದ ಸೋಮಪ್ಪ ನೀಲಕಂಠಯ್ಯನ ಕಡೆ ನೋಡಿ ತಳಮಳಗೊಂಡ.



"ಏನು ಸ್ವಾಮಿ" ಎಂದು ಕೇಳಿದ. ಸಮಾಧಾನ ಪ್ರತ್ಯುತ್ತರವೇನೂ ಬರಲಿಲ್ಲ. ಏನೂ ಅರ್ಥವಾಗದೆ ಸೋಮಪ್ಪ ಸರಸ್ವತಿ ಕಡೆ ನೋಡಿದ. ಆಕೆಗೆ ಮಾತ್ರ ಏನು ಗೊತ್ತು? "ನುಗ್ಗೆಕಾಯಿ ಖುಷಿಯಾಗಿ ತಿನ್ನುತ್ತಿದ್ದಾರಲ್ಲಾ ಎಂದು ನುಗ್ಗೆಕಾಯಿ ಹೋಳಿಲ್ಲವನ್ನೂ ತಂದು ಹಾಕಿಬಿಟ್ಟೆ." ಎಂದಳು ಸರಸ್ವತಿ. ಹಾಕಿದರೇನು? ಇಷ್ಟಬಂದಷ್ಟು ತೆಗೆದುಕೊಳ್ಳಬಹುದು. ಬೇಡದಿದ್ದರೆ ಬಿಸಾಡಬಹುದು. ಈ ಮಾತ್ರಕ್ಕೇ ತಲೆ ಚಚ್ಚಿಕೊಂಡು ಕಣ್ಣೀರು ಸುರಿಸುವುದಾದರೂ ಏಕೆ? ಎಂದೆನ್ನಿಸಿತು ಸೋಮಪ್ಪನಿಗೆ. "ಸ್ವಾಮಿ. ಬೇಡದಿದ್ದರೆ ಬಿಟ್ಟುಬಿಡಿ. ಅದಕ್ಕೇನು ಪರವಾಗಿಲ್ಲ." ಎಂದ ಸೋಮಪ್ಪ. ನೀಲಕಂಠಯ್ಯ ಅವನ ಕಡೆ ದುರದುರನೆ ನೋಡಿದ. ಹೀಗೇಕೆ ನೋಡುತ್ತಿದ್ದಾನೋ ಸೋಮಪ್ಪನಿಗೆ ತಿಳಿಯಲಿಲ್ಲ. ಪತ್ನಿಯೊಂದಿಗೆ "ಅವರನ್ನು ಕೇಳದೆ ಇನ್ನೇನೂ ಹಾಕಬೇಡ. ಬೇಕೆಂದುದನ್ನು ಮಾತ್ರ ತಂದು ಬಡಿಸು" ಎಂದ.

ನೀಲಕಂಠಯ್ಯ ಒಂದೊಂದೇ ನುಗ್ಗೇಕಾಯಿ ಅಗಿದು ನುಂಗುವ ವೇಳೆಗೆ ಬಹಳ ಹೊತ್ತಾಯಿತು. 'ಈತ ಹಿಪ್ಪೆಸಹ ಬಿಡದೆ ನುಂಗಿಬಿಡ್ತಾನಲ್ಲಾ?' ಎಂದು ಆಶ್ಚರ್ಯಗೊಂಡ ಸೋಮಪ್ಪ. ಆದರೆ ನೀಲಕಂಠಯ್ಯನ

ಹಿಡುಕು ಮುಖ ನೋಡಿ ಏನಾಡಿದರೆ ಏನು ಬರುವುದೋ ಎಂದು ಮೌನ ವಹಿಸಿದ. ಸೋಮಪ್ಪ ಸರಸ್ವತಿ ಇಬ್ಬರೂ ನೀಲಕಂಠಯ್ಯ ಎಲ್ಲವನ್ನೂ ತಿಂದು ಮುಗಿಸುವವರೆಗೆ ಕಾದರು. "ಮೊಸರು ಹಾಕಲೇ" ಎಂದು ಕೇಳಲು ಆತನು 'ಊಂ' ಎಂದು ಸಂಜ್ಞೆ ಮಾಡಿದ ತರುವಾಯ ಸರಸ್ವತಿ ಮೊಸರು ಹಾಕಿದಳು. ನೀಲಕಂಠಯ್ಯನ ಹೊಟ್ಟೆ ನೀರಿನಿಂದ ಆಗಾಗಲೇ ತುಂಬಿ ಬಿಟ್ಟಿತ್ತು. ಆದ್ದರಿಂದ ಆ ಮೊಸರನ್ನವನ್ನು ಬಲವಂತವಾಗಿ ನುಂಗಬೇಕಾಯಿತು. ಹೇಗೋ ಕೊನೆ ತುತ್ತು ಸಹ ನುಂಗಿ, ಎದ್ದು ಹೋಗಿ ಹಿತ್ತಿಲಲ್ಲಿ ಕೈ ತೊಳೆದುಕೊಂಡ. ಆದರೆ ಪ್ರಯಾಸದಿಂದ ಕಂಠಪೂರ್ತಿ ಎಲ್ಲವನ್ನೂ ತುಂಬಿದ್ದಸಾದ್ದರಿಂದ ಆತನು ತಿಂದಿದ್ದ ದಂಟಿನ ಹಿಪ್ಪೆ ಮೆಣಸಿನಕಾಯಿ ಎಲ್ಲಾ ಹೊರಗೆ ಬಂದುಬಿಟ್ಟಿತು.

ನೀಲಕಂಠಯ್ಯ ಆ ದಂಪತಿಗಳನ್ನು ಬಯ್ಯುತ್ತಾ ಒಳಗೆ ಬಂದು "ಇನ್ನು ಮೇಲೆ ನಿಮ್ಮ ಮನೆ ಹೊಸ್ತಿಲಿಗೆ ಕಾಲಿಡುವುದಿಲ್ಲ" ಎಂದ.

ಪಾಪ, ಅರಿಯದ ಆ ದಂಪತಿಗಳು ಇದೇನು ಗ್ರಹಚಾರವೋ ಎಂದುಕೊಂಡು. "ನಮ್ಮಿಂದ ಆದ ಅಪಚಾರವೇನು? ನೀವು ಹಿಪ್ಪೆಸಹ ನುಂಗಿಬಿಟ್ಟಿರಿ. ಪರಿಪರಿಯಾಗಿ ಕೇಳಿಕೊಂಡರೂ ಸಮಾಧಾನ ಹೇಳಲಿಲ್ಲ. ವಿಚಾರವಾದರೂ ಏನು?" ಎಂದು ಕೇಳಿದರು.

ನೀಲಕಂಠಯ್ಯ ಕೆಂಡವಾಗಿ "ಹಿಪ್ಪೆ ಅಲ್ಲ, ತೊಪ್ಪೆ ತಂದು ಎಲೆಯಲ್ಲಿ ಬಡಿಸಿದ್ದರೂ ತಿಂದುಬಿಡ್ತಿದ್ದೆ. ನನ್ನ ನಿಯಮ ಏನೆಂದುಕೊಂಡೆ? ಊಟದ ಮಧ್ಯೆ ನೀನು ಕೇಳಿಕೊಳ್ಳುವುದಲ್ಲ, ಅರಚಿಕೊಂಡು ಸತ್ತಿದ್ದರೂ ಸಮಾಧಾನ ಕೊಡೋಲ್ಲ. ಊಟ ಮಾಡುವಾಗ ಮಾತಾಡಿ ನನ್ನ ನಿಯಮವನ್ನು ಮಣ್ಣುಪಾಲು ಮಾಡಿಕೊಳ್ಳಲೇ?" ಎಂದು ಮೆಟ್ಟಿಲು ಇಳಿದು ಹಿಂದಿರುಗಿ ನೋಡದೆ ಹೊರಟುಹೋದ. ಕೋಪದ ಭರದಲ್ಲಿ ನೀಲಕಂಠಯ್ಯ ಆಡಿದ ಮಾತುಗಳಿಂದ ಆತನಿಗೆ ಊಟಮಾಡುವಾಗ ಎರಡು ನಿಯಮಗಳಿವೆಯೆಂದೂ, ಅವುಗಳನ್ನು ತನ್ನ ಹೆಂಡತಿ ಗ್ರಹಿಸಲಿಲ್ಲವೆಂದೂ ಸೋಮಪ್ಪನಿಗೆ ಈಗ ತಿಳಿಯಿತು. ಆದರೆ ನೀಲಕಂಠಯ್ಯ ಅನವಶ್ಯವಾಗಿ ಬಾಧೆ ಪಟ್ಟುದಕ್ಕೆ ದಂಪತಿಗಳು ತುಂಬಾ ವ್ಯಥೆಗೊಂಡರು.





ಒಂದಾನೊಂದು ಊರಿನಲ್ಲಿ ಮೋಹನ ಅಂತ ಒಬ್ಬ ಹುಡುಗನಿದ್ದ. ಅವನು ಕಡುಬಡವ. ಹೊತ್ತು ಹೊತ್ತಿಗೆ ತಿಂಡಿಗೆ ಹುಡಿಕಾಡಿಕೊಳ್ಳ ಬೇಕಾಗುತಿತ್ತು. ಇಷ್ಟು ದೈನ್ಯಾವಸ್ಥೆಯಲ್ಲಿದ್ದರೂ ಅವನ ಮುಖದಲ್ಲಿ ಚಿಂತೆಯೆಂಬುದು ಲವಲೇಶವು ಕಾಣುತಿರಲಿಲ್ಲ. ತಾನು ಸದಾಸಂತೋಷವಾಗಿರುವುದೇ ಅಲ್ಲದೆ ಹತ್ತಿರ ವಿರುವವರನ್ನು ಹಾಸ್ಯ ವಿನೋದಗಳಿಂದ ಪಕಪಕನೆ ನಗುವಂತೆ ಮಾಡುತ್ತಿದ್ದ.

ತಾನಿದ್ದ ಊರಿನಲ್ಲಿ ಜೀವನ ಸಾಗಿಸುವುದು ಅಸಾಧ್ಯವಾಗಿ ತೋರಲು, ಮೋಹನ ತನ್ನ ಕಾಲು ಎಲ್ಲಿಗೆ ಎಳೆದುಕೊಂಡು ಹೋದರೆ ಅಲ್ಲಿಗೆ ಹೋಗೋಣ ಅಂತ ನಿಶ್ಚಯಿಸಿಕೊಂಡು ಹೊರಟ. ಹೋಗಿ ಹೋಗಿ ಕೆಲ ದಿನಗಳಾದಮೇಲೆ ಒಂದು ನಗರ ಸೇರಿದ. ಅದನ್ನು ಉದಾರಿಯಾದ ಬಾದಶಹನೊಬ್ಬನು ಆಳುತ್ತಿದ್ದ. ಆ ಬಾದಶಹ ವಿಚಿತ್ರವಾದ ಒಂದು ಶಾಸನ ಮಾಡಿದ್ದ. 'ನಮ್ಮ ರಾಜ್ಯದಲ್ಲಿ ಅನಾಥರು ಯಾರಾದರೂ ಸತ್ತು ಹೋದರೆ ಅವರ ನಿಮಿತ್ತ ಆಗುವ ಖರ್ಚಿಗಾಗಿ ಕೋಶಾಗಾರದಿಂದ ಐವತ್ತು ಸಿಕ್ಕಾ (ನಾಣ್ಯ) ಗಳನ್ನು ಕೊಡುತ್ತೇವೆ' ಅಂತ.

ಈ ಶಾಸನವನ್ನು ಕಂಡು ಸಂತೋಷದಿಂದ ನೆಗೆದಾಡಿದ ಮೋಹನ. ಕೂಡಲೇ ಬಾದಶಹನ ಹತ್ತಿರ ಹೋಗಿ ತನ್ನ ಕಷ್ಟ ಸುಖಗಳನ್ನು ಮಣಿ ಪೋಣಿಸಿದಂತೆ ಹೇಳಿಕೊಂಡ. ಹೇಳಿದುದನ್ನೆಲ್ಲಾ ಕೇಳಿ ಬಾದಶಹ "ಎಲೈ ತರುಣನೇ, ನಮ್ಮ ಶಾಸನ ಕೇವಲ ಮೃತರಾದವರಿಗೆ ಮಾತ್ರವೇ ಹೊರತು ಬದುಕಿರುವವರನ್ನು ಉದ್ದೇಶಿಸಿ ಏರ್ಪಡಿಸಿದ್ದಲ್ಲ. ಪ್ರಾಣವಿರುವವರಿಗೇನು—ಹೇಗಾದರೂ ಕಷ್ಟಪಟ್ಟು ಒಂದಿಷ್ಟು ಸಂಪಾದಿಸಿಕೊಳ್ಳುತ್ತಾರೆ. ಆದರೆ ದಿಕ್ಕುದಿವಾಣ ಇಲ್ಲದ ಅನಾಥರು ಸದ್ಗತಿ ಪಡೆಯುವುದಾದರೂ ಹೇಗೆ? ಆದುದರಿಂದ ಅವರನ್ನು ಉದ್ಧಾರ ಮಾಡಲು ಈ ಶಾಸನ ಮಾಡಿದೆವು. ನೀನು ಹೋಗು-ನಿನಗೊಂದು

ಗೋವಿಂದಭಟ್ಟ. ಮಂಗಳೂರು.



ಒಂದುವೇಳೆ ನಾನು ಸತ್ತುಹೋದೆ ಅಂತ ಭಾವಿಸಿ. ಆಗ ತಮ್ಮ ಶಾಸನದ ಪ್ರಕಾರ ನನಗಾಗಿ ಐವತ್ತು ಸಿಕ್ಕಾ ಖರ್ಚು ಮಾಡದೆ ತಪ್ಪಿಸಿಕೊಳ್ಳುವಂತಿಲ್ಲ. ಅದರಲ್ಲಿ ಅರ್ಧ ಹಣ ಅಂದರೆ ಇಪ್ಪತ್ತೈದು ಸಿಕ್ಕಾಗಳನ್ನು ಈಗ ತಾವು ನನಗೆ ಕೊಡಿಸಿ ಕೊಟ್ಟದ್ದೇ ಆದರೆ, ನಾನು ಈ ರಾಜ್ಯ ಬಿಟ್ಟು ಬೇರೊಂದು ಜಾಗಕ್ಕೆ ಹೊರಟು ಹೋಗುತ್ತೇನೆ. ಹೀಗೆ ಮಾಡುವುದರಿಂದ ಮಿಕ್ಕ ಇಪ್ಪತ್ತೈದು ನಾಣ್ಯ ನಿಮ್ಮ ಖಜಾನೆಯಲ್ಲೇ ಉಳಿಯುತ್ತೆ.?" ಎಂದು ಬಾದಶಹನಿಗೆ ಸಮಾಧಾನಹೇಳಿದ.

ಈ ಮಾತುಗಳು ಬಾದಶಹನಿಗೆ ತುಂಬಾ ಮೆಚ್ಚಿಕೆಯನ್ನುಂಟು ಮಾಡಿದವು. ಇಷ್ಟಕ್ಕೇ ಇವನ ಪೀಡೆ ಕಳೆಯುತ್ತೆ. ಇಪ್ಪತ್ತೈದು ನಾಣ್ಯಗಳು ಸಹ ಮಿಗುವುದು ಎಂದು ಕೂಡಲೇ ಕೋಶಾಗಾರದಿಂದ ಹಣ ತರಿಸಿಕೊಟ್ಟ. ಇದನ್ನು ತೆಗೆದುಕೊಂಡು ಮೋಹನ ಬೇರೊಂದು ಊರಿಗೆ ಹೋಗದೆ ಆ ನಗರದಲ್ಲೇ ಇದ್ದುಕೊಂಡು ಆ ಹಣದಿಂದಲೇ ಕಾಲಹರಣ ಮಾಡುತ್ತಿದ್ದ.

ಕಿಲುಬು ಕಾಸೂ ಕೊಡಲಾರೆವು." ಎಂದು ಹೇಳಿದ.

ಆಗ ಮೋಹನ "ಪ್ರಭೂ, ಆಳುವ ಮಹಾಸ್ವಾಮಿಯವರು ನಾನೇನೋ ಜೀವದಿಂದಿರುವವನೆಂತ ಎಣಿಸಿರಬಹುದು. ಈ ಕಷ್ಟಕಾರ್ಪಣ್ಯಗಳಿಂದ, ಅರೆ ಹೊಟ್ಟೆಗೆ ಊಟದಿಂದ ಅರೆ ನಿರ್ಜೀವವಾಗಿದ್ದೇನೆ. ಕೆಲ ದಿನಗಳಲ್ಲೇ ಸತ್ತುಹೋಗಬಹುದು. ಈ ಮಾತು ತಮ್ಮ ಕಿವಿಗೆ ಬೀಳಲು ತುಂಬಾ ದಿನ ಹಿಡಿಯಲಾರದು" ಎಂದ.

"ಸರಿ, ಸತ್ತುಹೋಗು. ಆಮೇಲಿನ ವಿಷಯ ನಾವು ನೋಡಿಕೊಳ್ಳುತ್ತೇವೆ." ಎಂದ ಬಾದಶಹ.

ಅದಕ್ಕೆ ಮೋಹನ "ಪ್ರಭೂ, ಅಷ್ಟು ಸುಲಭವಾಗಿ ಅಪ್ಪಣೆ ಕೊಡುತ್ತಿರುವಿರಲ್ಲಾ.

ಇಷ್ಟರಲ್ಲಿ ಇದ್ದಕ್ಕಿದಂತೆಯೇ ಆ ಪಟ್ಟಣದಲ್ಲಿ ಕಾಲರಾ ವ್ಯಾಪಿಸಿ ಒಂದೆರಡು ದಿನಗಳಲ್ಲಿ ಬಹು ಜನರನ್ನು ಬಲಿ ತೆಗೆದುಕೊಂಡಿತು. ಅದರಿಂದ ಮನೆ ಖಾಲಿಮಾಡಿ ಎಲ್ಲಿಗಾದರೂ ಹೋಗಿ ಪ್ರಾಣ ಉಳಿಸಿ ಕೊಳ್ಳುವಂತೆ ಪ್ರಜೆಗಳಿಗೆ ಬಾದಶಹನು ಆಜ್ಞೆ ಮಾಡಿದ. ಆಗ

ಮೋಹನನು ಮತ್ತೆ ಬಾದಶಹನ ಹತ್ತಿರ ಹೋಗಿ "ಮಹಾ ಪ್ರಭೂ, ಈಗಾಗಲೇ ಸತ್ತುಹೋಗಿರಬೇಕಿತ್ತು. ಆದರೆ ತಾವು ಕೃಪೆದೋರಿ ನನ್ನನ್ನು ಆಗ ಕಾಪಾಡಿದಿರಿ. ಇನ್ನೇನು ಹೊರಡೋಣ ಎಂದುಕೊಳ್ಳುತ್ತಿರುವಲ್ಲಿ ಈಗ ಮತ್ತೊಂದು ವಿಪತ್ತು ಬಂತು. ಈಸಾರಿ ಸಾವುತಪ್ಪಿಸಿ ಕೊಳ್ಳುವಂತಿಲ್ಲವಲ್ಲಾ ಎಂದು ಯೋಚಿಸುತ್ತಿದ್ದೇನೆ" ಎಂದ.



"ಅಪ್ಪಾ, ಇನ್ನೂ ಯೋಚಿಸುತ್ತಾ ಕುಳಿತಿರುವಿಯಾ, ತಡಮಾಡಬೇಡ. ಊರುಬಿಟ್ಟು ಹೊರಟುಹೋಗು. ಪ್ರಾಣ ಕಾಪಾಡಿಕೊ" ಎಂದು ಬಾದಶಹ ಅವನನ್ನು ತೊಂದರೆ ಪಡಿಸಿದ.

"ಪ್ರಭೂ, ಇದಕ್ಕೆಮೊದಲು ತಾವುಕೊಟ್ಟ ಹಣ ಖರ್ಚಾಗಿ ಬಿಟ್ಟಿತು. ಈಗ ಹೋಗೋಣವೆಂದರೆ ದಾರಿ ಕಾಣಿಸದು. ಅತ್ತಕಡೆ ನೋಡಿದರೆ ಮಹಾಮಾರಿ ಬಾಯಿ ತೆರೆದುಕೊಂಡಿದ್ದಾಳೆ. ಯಾವಕ್ಷಣ ಯಾರನ್ನು ಕಬಳಿಸುವಳೋ ತಿಳಿಯದು. ಈಸಾರಿ ನಾನು ಸಾಯುವುದು ಖಂಡಿತವಾದರೆ ಆಳುವ ಮಹಾಸ್ವಾಮಿಯವರ ಖಜಾನೆಯಿಂದ ಮತ್ತೆ ಐವತ್ತು ನಾಣ್ಯ ಖಾಲಿ ಆಗುತ್ತದೆ. ಪಾಪ ಇದುವರೆಗಾಗಲೇ ನನಗಾಗಿ ಇಪ್ಪತ್ತೈದು ನಾಣ್ಯ ಕೊಟ್ಟಿರುವಿರಿ. ಅದನ್ನೂ ಇದನ್ನೂ ಸೇರಿಸಿದರೆ ಒಟ್ಟುನನಗಾಗಿ ಎಪ್ಪತ್ತೈದು ನಾಣ್ಯಗಳನ್ನು ವೆಚ್ಚಮಾಡಿದಂತೆ ಆಗುತ್ತದೆ. ಅದರಿಂದ ಪ್ರಭುಗಳಿಗೆ ಈ ಖರ್ಚು ಹೇಗೆ ಉಳಿಸಲಿ ಎಂದು ಯೋಚಿಸುತ್ತಿದ್ದೇನೆ...." ಎಂದ ಮೋಹನ.

ಆಗ ಬಾದಶಹನು ಅವನನ್ನು ಮೆಚ್ಚಿಕೊಂಡು "ಮೋಹನ್, ನೀನು ವಯಸ್ಸಿನಲ್ಲಿ ಚಿಕ್ಕವನೇ ಆದರೂ ತುಂಬಾ ಉಪಾಯಶಾಲಿ. ನಿನ್ನ ತಿಳುವಳಿಕೆಗೆ ನಾವು ಸಂತೋಷಗೊಂಡೆವು. ನೀನು ನಮ್ಮ ಆಸ್ಥಾನದಲ್ಲಿ ಒಬ್ಬ ಮಂತ್ರಿಯಾಗಿದ್ದುಬಿಡಬೇಕು." ಎಂದ. ಅಂದಿನಿಂದ ಮೋಹನನು ಮಂತ್ರಿಯಾದ. ತಾನು ಅಧಿಕಾರದಲ್ಲಿರುವಾಗ ಜೀವದಿಂದ ಇರತಕ್ಕ ಮನುಜರಿಗೇನೇ ತುಂಬಾ ಉಪಕಾರವಾಗುವಂತೆ ಏರ್ಪಾಟು ಮಾಡಿದ.




ಪ್ರಯುತ ಎಂಬ ಋಷಿಗೆ ಅಯುತ, ನಿಯುತ ಎಂಬ ಇಬ್ಬರು ಮಕ್ಕಳು. ಅವರು ಅಗಸ್ತ್ಯ ಮುನಿಯ ಪ್ರಿಯ ಶಿಷ್ಯರಾಗಿ ಅವರಿಂದ ವಿದ್ಯೆ ಕಲಿತುಕೊಂಡರು. ಅವರಿಬ್ಬರೆಂದರೆ ಅತಿ ಮಮತೆ, ಅಭಿಮಾನವಿದ್ದುದರಿಂದ ಆ ಅಣ್ಣ ತಮ್ಮಂದಿರಿಗೆ ಮದುವೆ ಮಾಡಿಸಿ ಕಳುಹಿಸೋಣ ಎಂದು ಅನ್ನಿಸಿತು ಅಗಸ್ತ್ಯಮಹಾಮುನಿಗೆ. ಅನುರೂಪರಾದ ಕನ್ಯೆಯರು ಎಲ್ಲಿದ್ದಾರೆಂದು ದಿವ್ಯ ದೃಷ್ಟಿಯಿಂದ ನೋಡಿದರು. ಬ್ರಹ್ಮನಬಳಿ ಸುಂದರ ಕನ್ಯೆಯರಿಬ್ಬರು ಕಾಣಿಸಿದರು. ಅಗಸ್ತ್ಯರು ಕೂಡಲೇ ಕಮಂಡಲು ತೆಗೆದುಕೊಂಡು ಬ್ರಹ್ಮನಿದ್ದ ಸತ್ಯಲೋಕಕ್ಕೆ ಹೋಗಿ ತಾನು ಬಂದ ಕೆಲಸವನ್ನು ತಿಳಿಸಿದರು. ಬ್ರಹ್ಮದೇವನು ಸಂತೋಷದಿಂದ ಗಾಯತ್ರಿ, ಸಾವಿತ್ರಿ ಎಂಬ ಆ ಕನ್ಯೆಯರನ್ನು ಅಗಸ್ತ್ಯರಿಗೆ ಒಪ್ಪಿಸಿದ. ತಾನು ಬಂದಕಾರ್ಯ ಕೈಗೂಡಿದುದಕ್ಕೆ ಮುನಿ ಸಂತೋಷಗೊಂಡು, ಹುಡುಗಿಯರನ್ನು ಸಂಗಡ ಕರೆದುಕೊಂಡು ತನ್ನ ಆಶ್ರಮಕ್ಕೆ ಹಿಂತಿರುಗಿದರು. ಶಿಷ್ಯರನ್ನು ಕರೆದು "ಅಯುತಾ, ಈ ಗಾಯತ್ರಿಯನ್ನು ನೀನು ವಿವಾಹವಾಗು, ಸಾವಿತ್ರಿಯನ್ನು ನಿಯುತ ಮದುವೆಯಾಗಲಿ" ಎಂದರು. ಕಿರಿಯವನಾದ ನಿಯುತ ಮದುವೆಯೆಂದಕೂಡಲೇ ಸಂಭ್ರಮಗೊಂಡ; ಆದರೆ ಅಯುತ "ನನಗೆ ಮದುವೆಬೇಡ; ಮುಂಜಿಯೂಬೇಡ" ಎಂದ.

"ನಾನು ಸ್ವರ್ಗಲೋಕಕ್ಕೆ ಹೋಗಿ ಹುಡುಗಿಯರನ್ನು ಕರೆತಂದರೆ ಮದುವೆಬೇಡ ಅಂತೀಯಲ್ಲೋ ಮೂರ್ಖ" ಎಂದು ಕಣ್ಣು ಕೆಂಪಗೆ ಮಾಡಿದರು ಅಗಸ್ತ್ಯರು.

ಆದರೆ ಅಯುತ ಭಯಪಡಲಿಲ್ಲ. "ಗುರುದೇವಾ, ಮದುವೆಯಾದರೆ ಸಂಸಾರಭಾರ ತಲೆಯಮೇಲೆ ಬೀಳುತ್ತದೆ. ಈ ತಾಪತ್ರಯದಲ್ಲಿ ತೊಳಲುತ್ತಿದ್ದರೆ ಮೋಕ್ಷ ಸಂಪಾದಿಸುವುದಾದರೂ ಹೇಗೆ?" ಎಂದು ಕೇಳಿದ.

ಆಗ ಅಗಸ್ತ್ಯರು "ಓ, ಆಗಲೇ ಮೋಕ್ಷದ ಮಾತು ತೆಗೆದೆಯೋ? ಮದುವೆಯಾಗುವುದನ್ನು ತಪ್ಪಿಸಿಕೊಂಡ ಮಾತ್ರಕ್ಕೆ ಮೋಕ್ಷ ಪ್ರಾಪ್ತವಾಗುವುದೆಂದುಕೊಂಡೆಯೋನೋ,

ಪಿ. ವಿ. ರಾಮಚಂದ್ರಮೂರ್ತಿ.



ಹುಚ್ಚಾ! ಚಿಕ್ಕವರಾಗಿರುವಾಗ ಓದಿಕೊಳ್ಳ ಬೇಕು. ವಿದ್ಯೆಮುಗಿದಮೇಲೆ ಮದುವೆಯಾಗಿ, ಧರ್ಮದಿಂದ ಕಾಲಕ್ಷೇಪ ಮಾಡುತ್ತಾ ಮನೆಗೆ ಬಂದ ಅತಿಥಿ ಅಭ್ಯಾಗತರನ್ನು ಸತ್ಕರಿಸ ಬೇಕು. ಮಕ್ಕಳನ್ನು ಹೆತ್ತು, ವಂಶವನ್ನೂ ಅಭಿವೃದ್ಧಿ ಮಾಡಿ, ಪಿತೃದೇವತೆಗಳ ಋಣ ತೀರಿಸಿಕೊಳ್ಳಬೇಕು. ಮೋಕ್ಷವೆಂದರೆ ವಾನ ಪ್ರಸ್ಥಾಶ್ರಮದಲ್ಲಿ ನಡೆಸಬೇಕಾದ ವಿಚಾರ. ಬ್ರಹ್ಮಚರ್ಯ ಗೃಹಸ್ಥಾಶ್ರಮಗಳಾದಮೇಲೆ ಮುದಿತನದಲ್ಲಿ ನೀನು ಹೇಳಿದ ಸಂಸಾರ ತಾಪತ್ರಯಗಳನ್ನು ತೊರೆದು, ನೀನೂ, ನಿನ್ನ ಪತ್ನಿ ಅರಣ್ಯಕ್ಕೆ ತೆರಳಿ 'ರಾಮ, ಕೃಷ್ಣಾ' ಅಂತ ಮೋಕ್ಷಸಾಧನೆಗೆ ಪ್ರಯತ್ನಿಸುವಿರಂತೆ. ಈಗ ನಾನು ಹೇಳಿದಪ್ರಕಾರ ವಿವಾಹ ಮಾಡಿಕೋ" ಎಂದರು. ಅಯುತ ಈ ಮಾತು ಕಿವಿಗೆ ಹಾಕಿಕೊಳ್ಳಲಿಲ್ಲ. ಅಯುತನ ಬಗ್ಗೆ ಅಗಸ್ತ್ಯರಿಗೆ ಕೋಪಬಂತು. ಆದರೂ ಅದನ್ನು ತಡೆದುಕೊಂಡರು. ತನ್ನಮಾತು ಕೇಳದ ಪ್ರಯುಕ್ತ ಅಯುತನನ್ನು ಆಶ್ರಮದಿಂದ ಹೊರಗೆ ಅಟ್ಟಿದರು. ಬ್ರಹ್ಮನಹತ್ತಿರದಿಂದ ಕರೆತಂದ ಇಬ್ಬರು ಕನ್ಯೆಯರನ್ನೂ ನಿಯತನಿಗೆ ಕೊಟ್ಟುಮದುವೆ ಮಾಡಿದರು.

ಅಯುತ ಗುರುವಿನ ಆಶ್ರಮವನ್ನು ಬಿಟ್ಟು ಹಿಮಗಿರಿಗೆ ಹೋಗಿ ಉಗ್ರವಾದ ತಪಸ್ಸು ಮಾಡಲು ಪ್ರಾರಂಭಿಸಿದ.



ಕೆಲಕಾಲದಲ್ಲೇ ಈ ವಿಷಯ ಎಲ್ಲ ಲೋಕ ಗಳಿಗೂ ತಿಳಿಯಿತು. ಎಲ್ಲರಿಗಿಂತಲೂ ಮೊದಲು ಇಂದ್ರನಿಗೆ ತಿಳಿಯಿತು. ಯಾರು ಉಗ್ರವಾದ ತಪಸ್ಸು ಮಾಡುತ್ತಿದ್ದರೂ ಇಂದ್ರ ನಿಗೆ ಹೆದರಿಕೆ. ಏಕೆ ಗೊತ್ತೇ? ಆ ತಪಸ್ಸಿ ನಿಂದ,ಎಲ್ಲಿ ತನ್ನ ದೇವೇಂದ್ರಪದವಿ ಕೇಳಿಬಿಡು ವರೋ ಎಂಬ ಭಯ. ಅಯುತನ ತಪಸ್ಸಿನ ವಿಷಯ ಕೇಳಿದಾಗಲೂ ಇಂದ್ರನಿಗೆ ಇದೇ ಹೆದರಿಕೆ ಆಯಿತು. ಆದ್ದರಿಂದ ಆತನು ಒಬ್ಬ ಬ್ರಾಹ್ಮಣನ ವೇಷಧರಿಸಿ, ಶಿಷ್ಯರವೇಷದಲ್ಲಿ ತನ್ನೊಂದಿಗೆ ಕೆಲವುದೇವತೆಗಳನ್ನು ಸಂಗಡ ಕರೆದುಕೊಂಡು ಅಯುತನ ಹತ್ತಿರಕ್ಕೆ ಬಂದ. ತನ್ನ ಹತ್ತಿರವಿದ್ದ ಕಾಮಧೇನುವನ್ನು ಒಂದು ಸಾಮಾನ್ಯ ಹಸುವಿನಂತೆ ಬದಲಾಯಿಸಿ






ಅದನ್ನು ಒಬ್ಬ ಶಿಷ್ಯನ ಕೈಯಿಂದ ಹೊಡೆಸಿ ಕೊಂಡು ಬಂದ.

ಶಿಷ್ಯರೊಂದಿಗೆ ಬಂದ ಆ ಮಾಯಾ ಬ್ರಾಹ್ಮಣನಿಗೆ ಆತಿಥ್ಯ ಕೊಡಲು ಅಯುತ ಹಣ್ಣು ಹಂಪಲು ತಂದು, ಕಷ್ಟಪಟ್ಟು ತಾನೇ ಬಡಿಸಿದ. ಕಪಟ ಬ್ರಾಹ್ಮಣ "ಏನಪ್ಪಾ ಮಗೂ, ನೀನೇ ಎಲ್ಲ ಕೆಲಸ ಮಾಡುತ್ತಿರುವೆಯಲ್ಲಾ, ನಿನ್ನ ಪತ್ನಿ ಇಲ್ಲವೇ?" ಎಂದ. ಅವಕ್ಕೆ ಅಯುತ "ನಾನು ಮದುವೆಯಾಗಲಿಲ್ಲ. ತಪವನ್ನಾಚರಿಸಿ ಬೇಗ ಮೋಕ್ಷ ಪಡೆಯೋಣವೆಂದು ನನ್ನ ಉದ್ದಿಶ್ಯ" ಎಂದ. ಆಗ ಆ ವೃದ್ಧ ಬ್ರಾಹ್ಮಣ "ಅಯ್ಯೋ, ಎಂಥಕೆಲಸಮಾಡಿದೆ? ಮದುವೆಯಾಗಿ ಸಂಸಾರ ಸೌಖ್ಯಗಳನ್ನು ಅನುಭವಿಸಿ, ಮುದುಕನಾದ ಮೇಲೆ ಮೋಕ್ಷಕ್ಕಾಗಿ ಪ್ರಯತ್ನಿಸಬೇಕೇ ಹೊರತು ಈಗಲೇ ಏನು ಅವಸರ? ಹೀಗೆ ಕಷ್ಟಪಡದೆ ಯುಕ್ತಳಾದ ಯುವತಿಯನ್ನು ಮದುವೆಯಾಗು" ಎಂದು ಸಲಹೆ ಕೊಟ್ಟ. "ನಿಮಗೇಕೆ ನನ್ನ ಗೊಡವೆ" ಎಂದು ನಿರಾಕರಿಸಿದ, ಅಯುತ.

ಇಂದ್ರ ಕ್ರುದ್ಧನಾದ. ಹೋಗುತ್ತಾ ಕಾಮಧೇನುವನ್ನು ಅಲ್ಲೇ ಬಿಟ್ಟುಬಿಟ್ಟು "ಎಲೈ ಕಾಮಧೇನು, ನೀನಿಲ್ಲೇ ಇದ್ದು, ಹೇಗಾದರೂ ಇವನಿಗೆತಕ್ಕ ಶಾಸ್ತಿಮಾಡಿ ಬಾ" ಎಂದು ಅದರೊಂದಿಗೆ ಗುಟ್ಟಾಗಿಹೇಳಿ ಶಿಷ್ಯರೊಂದಿಗೆ ಹೊರಟು ಹೋದ.

ಮಾರನೆಯದಿನ ಅಯುತ ಸಮಿತ್ತುಗಳಿಗಾಗಿ ತಿರುಗಾಡುತ್ತಿದ್ದರೆ 'ಅಂಬಾ' ಎಂಬ ಕೂಗೊಂದು ಕೇಳಿಸಿತು. ಧ್ವನಿ ಬಂದಕಡೆ ಹೋಗಿನೋಡಲು, ಹಿಂದಿನ ದಿನಮುದಿ ಬ್ರಾಹ್ಮಣನೊಂದಿಗಿದ್ದ ಹಸು ಒಂದುಕಡೆಬಿದ್ದು ಏಳಲಾರದೆ ಒದ್ದಾಡುತಿತ್ತು. "ಅಯ್ಯೋ" ಎಂದು ಮರುಕಗೊಂಡು ಅಯುತ ಅದಕ್ಕೆ ಉಪಚಾರ ಮಾಡಿದ. ಕ್ರಮೇಣ ಅದು ಚೇತರಿಸಿಕೊಂಡು ನಡೆದಾಡಲು ಮೊದಲುಮಾಡಿತು. ಅದರ ಸಂರಕ್ಷಣೆ ಮಾಡುತ್ತಿರಲು ಅಯುತನಿಗೆ ತಪಸ್ಸು ಮಾಡಲು ಸಮಯವಿಲ್ಲವಾಯಿತು.

ತಪಸ್ಸಿಗೆ ಮಾತ್ರ ವಿಘ್ನವೊದಗಿದ್ದರೆ ಚಿಂತೆಯಿಲ್ಲ. ಆದರೆ ಹಸುವಿನ ಮೂಲಕ ದೊಡ್ಡ ಉಪದ್ರವವೇ ಉಂಟಾಯಿತು ಅಯುತನಿಗೆ.



ಅದು ಕೆಲದಿನಗಳಲ್ಲಿ ಗರ್ಭಿಣಿಯಾಗಿ ಒಂದು ಹೋರಿಕರು ಹಾಕಿತು. ಆತನಿಟ್ಟ ಮೇವು, ಮಾಡಿದಸಂರಕ್ಷಣೆಯ ಫಲಿತವಾಗಿ ಆ ಹಸು ಮತ್ತು ಕರು ಕೆಲವುದಿನಗಳಲ್ಲೇ ಬಲಿತುಸೊಕ್ಕಿ ಸುತ್ತಮುತ್ತಲಿರುವ ಮುನಿಗಳ ಆಶ್ರಮಗಳನ್ನು ಧ್ವಂಸಮಾಡ ಹತ್ತಿದವು. ಅವರೆಲ್ಲರೂ ಬಂದು ಅಯುತನಲ್ಲಿ ಮೊರೆಯಿಟ್ಟುಕೊಂಡರು. ಆಗ ಅಯುತ ತುಂಬಾ ಆಲೋಚಿಸಿ ಆ ಹಸು ಮತ್ತು ಕರುವನ್ನು ಯಾರೂ ಇಲ್ಲದ ಒಂದು ಅಡವಿಗೆ ಎಳೆದೊಯ್ಯಲನುವಾದ.

ಇದ್ದಕ್ಕಿದ್ದಂತೆಯೇ ಆ ಹಸು ಹಠಾತ್ತನೆ ಮುಂದಕ್ಕೆ ನೆಗೆದು ಹಾರಿ ಅರಿಚಿತು. ಆ ನೂಕಾಟಕ್ಕೆ ಹಗ್ಗ ಹಿಡಿದಿದ್ದ ಅಯುತ ಒಂದು ಹುತ್ತದ ಮೇಲೆ ಹಾರಿಬಿದ್ದ. ಪೆಟ್ಟುತಿಂದ ಈತನು ಮೆಲ್ಲನೆದ್ದು ಮೈಕೊಸರಿಕೊಳ್ಳುತ್ತಿರುವಲ್ಲಿ ಹುತ್ತದಿಂದ ಮನುಷ್ಯನ ಸ್ವರದಲ್ಲಿ "ಯಾರೋ ನೀನು! ನಿಶ್ಚಲನಾಗಿ ತಪಸ್ಸು ಮಾಡುತ್ತಿದ್ದರೆ ನನ್ನ ಮೇಲೆ ಕಪ್ಪೆ ಎಗರಿದ ಹಾಗೆ ಹಾರಿಬಿದ್ದೆ? ಕಪ್ಪೆಯಾಗಿ ಜನಿಸು" ಎಂದು ಶಾಪವಿತ್ತರು. ಅಯುತ ನಡುಗುತ್ತಾ ಆ ಧ್ವನಿ ಬಂದ ಹುತ್ತದಕಡೆ ನೋಡಲು, ಅದರಲ್ಲಿ ಒಬ್ಬ ಮುನೀಶ್ವರನಿದ್ದ. ಅಯುತನು ಆತನ ಪಾದಗಳಮೇಲೆ ಬಿದ್ದು 'ಕ್ಷಮಿಸಿ' ಎಂದು ಕೇಳಿಕೊಂಡ. ಆ ಮುನಿ ವಿಷಯವನ್ನೆಲ್ಲಾ ಗ್ರಹಿಸಿ, ಮರುಕಗೊಂಡು, ಇಂದ್ರ ಮಾಡಿದ ಮೋಸವನ್ನು ಅಯುತನಿಗೆ ವಿಶದೀಕರಿಸಿದ. "ಅಪ್ಪಾ, ನನ್ನ ಶಾಪವನ್ನು ಆದ್ದರಿಂದ ಹಿಂದೆಕ್ಕೆ ತೆಗೆದುಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ನೀನು ಕಪ್ಪೆಯಾಗಿ ಜನಿಸಲೇಬೇಕು. ಆದರೆ ನಿನಗೆ ಮೋಕ್ಷಸಿದ್ಧಿಸುವ ಸಲುವಾಗಿ ಪಾಂಡುರಂಗ ವಿಠಲ ಸನ್ನಿಧಿಯಲ್ಲಿರುವ ಕಲ್ಯಾಣಿಯಲ್ಲಿ ನಿನ್ನನ್ನು ಕಪ್ಪೆಯನ್ನಾಗಿ ಹುಟ್ಟಿಸುತ್ತೇನೆ." ಎಂದ ಆ ಮುನಿ.

ಆಪ್ರಕಾರವೇ ಅಯುತ ಆ ಕಲ್ಯಾಣಿಯಲ್ಲಿ ಕಪ್ಪೆಯಾಗಿ ಹುಟ್ಟಿದ. ಕಾಮಧೇನು ಇಂದ್ರನ ಹತ್ತಿರಹೋಗಿ ನಡೆದ ವಿಷಯವನ್ನೆಲ್ಲಾ ಹೇಳಿತು. "ಸರಿಯಾದ ಶಾಸ್ತಿ ಆಯಿತು" ಎಂದು ಇಂದ್ರ ಸಂತೃಪ್ತನಾದ.

ಆದರೆ ಇಂದ್ರ ನೆನೆಸಿಕೊಂಡಂತೆ ಅಯುತ ನಿಗೆ ಶಾಸ್ತಿಯಾಗಲೇ ಇಲ್ಲ. ಏಕೆಂದರೆ ಕಪ್ಪೆ ಯಾಗಿ ಹುಟ್ಟಿದ್ದರೂ ಸಹ ಅಯುತನಿಗೆ ಪಾಂಡುರಂಗನ ಸಾನ್ನಿಧ್ಯ ಸಿಕ್ಕಿತು.

ಹೀಗೇ ಇರುವಲ್ಲಿ ಒಬ್ಬ ರಾಜಕುಮಾರಿ ತನ್ನ ಸಖಿಯರೊಂದಿಗೆ ಪಾಂಡುರಂಗಸ್ವಾಮಿಯ ದರ್ಶನಾರ್ಥವಾಗಿ ಅಲ್ಲಿಗೆ ಬಂದಳು. ಸ್ವಾಮಿಯ ಪಾದಗಳ ಬಳಿಯಿದ್ದ ಆ ಕಪ್ಪೆಯನ್ನು ಕಂಡಕೂಡಲೇ ತಾವು ಬಂದ ಕಾರ್ಯವನ್ನು ಮರೆತು, ಆ ಕಪ್ಪೆಯನ್ನು ಹಿಡಿಯುವ ಅಭಿಲಾಷೆ ಜನಿಸಿತು. ಕಪ್ಪೆ ಆ ಸಖಿಯರನ್ನೆಲ್ಲಾ ತಪ್ಪಿಸಿಕೊಂಡು ಹೋಗೋಣ ವೆಂದುಕೊಂಡು, ಎದುರಾಗಿ ತನಗಾಗಿ ಅವಿತಿಟ್ಟುಕೊಂಡಿದ್ದ ರಾಜಕುಮಾರಿಯ ಕೈಗೆಸಿಕ್ಕಿಕೊಂಡಿತು. "ನೋಡಿದಿರಾ, ನಾಹಿಡಿದು ಬಿಟ್ಟೆ" ಎಂದು ಆ ರಾಜಕುಮಾರಿ ಆ ಕಪ್ಪೆಯನ್ನು ತನ್ನ ಕೈಯಲ್ಲಿ ಆಡಿಸುತ್ತಿದ್ದಳು. ಅಲ್ಲಿಯೇ ಒಬ್ಬ ಮುನಿ ತಪಸ್ಸು ಮಾಡುತ್ತಿದ್ದ. ಹುಡುಗು ಬುದ್ಧಿಯಿಂದ ಆ ಕಪ್ಪೆಯನ್ನು ತೆಗೆದುಕೊಂಡು ಹೋಗಿ ಆತನಮೇಲೆ ಹಾಕಿದಳು ಆ ರಾಜಕುಮಾರಿ. ಆತನು ಬೆಚ್ಚಿಬಿದ್ದೆದ್ದು "ಎಲೈ ನೀನು ತುಂಬಾ ಸೊಕ್ಕಿರುವಂತಿದೆ. ನನ್ನೊಂದಿಗೆ ಹುಡುಗಾಟವೇ? ಕಪ್ಪೆಯನ್ನು ನನ್ನಮೇಲೆ ಹಾಕಿದೆಯಾದುದರಿಂದ ನೀನೂ ಕಪ್ಪೆಯಾಗಿ ಜನಿಸಿ, ನಿನ್ನ ಕೈಯಲ್ಲಿರುವ ಆ ಕಪ್ಪೆಯೊಂದಿಗೆ ಸಂಸಾರ ಮಾಡುವಳಾಗು" ಎಂದು ಶಾಪಕೊಟ್ಟು ಹೋದ.

ಮುನಿ ಶಾಪಕ್ಕೆ ಎದುರಿಲ್ಲವಲ್ಲಾ. ಆರಾಜಕುಮಾರಿ ಕಪ್ಪೆಯಾಗಿ ಜನಿಸಿದಳು. ಕಪ್ಪೆರೂಪದಲ್ಲಿದ್ದ ಆಕೆ ಅಯುತನನ್ನು ವಿವಾಹವಾದಳು. ಆ ಕಪ್ಪೆ ದಂಪತಿಗಳಿಗೆ ಒಬ್ಬ ಮಗ ಸಹ ಹುಟ್ಟಿದ. ಅವನು ಮಾನವ ರೂಪದಲ್ಲೇಇದ್ದು, ಪಾಂಡುರಂಗನ ಭಕ್ತನಾದ.

ಆ ಹುಡುಗನ ಸುಕೃತದಿಂದ, ಪಾಂಡುರಂಗನನ್ನು ಬೇಡಿಕೊಳ್ಳಲು, ಆತನ ತಂದೆತಾಯಿಗಳಿಗೆ ಮಾಮೂಲು ರೂಪಬಂತು. ದೇವರದಯೆ ಸಂಪಾದಿಸಿ ಎಲ್ಲರೂ ಮೋಕ್ಷಕ್ಕೆ ಅರ್ಹರಾದರು. ಅಯುತನ ಕೋರಿಕೆ ನೆರವೇರಿತು.



# ಹುಲಿಗೆ ಪಟ್ಟೆಗಳಿದ್ದರೆ ಚಿರತೆಗೆ ಚುಕ್ಕೆಗಳಿವೆ

## ಏಕೆ-ಗೊತ್ತೆ?



ಬಹಳ ಹಿಂದೆ ಸಂಗನೂರು ಎಂಬ ಗ್ರಾಮವಿತ್ತು. ಗ್ರಾಮದಲ್ಲಿ ಒಂದು ದೊಡ್ಡ ಬೇವಿನ ಮರವಿತ್ತು. ಆ ಬೇವಿನಮರ ಆ ಊರಿನ ಮಾರಮ್ಮ ದೇವತೆಯ ಆವಾಸಸ್ಥಳವೆಂದು ಅಲ್ಲಿಯ ಜನರ ನಂಬಿಕೆ, ಅದರಿಂದ ಅವರೆಲ್ಲರೂ ಆ ಬೇವಿನ ಮರಕ್ಕೆ ಗುಡಿಕಟ್ಟಿ ಮರದ ಸುತ್ತಲೂ ಅರಿಸಿಣ ಹಚ್ಚಿ, ಕುಂಕುಮ ವಿಟ್ಟು, ಪೂಜೆ ಪುರಸ್ಕಾರಗಳಿಂದ ಆರಾಧಿಸುತ್ತಿದ್ದರು.

ಹೀಗೆ ಆರಾಧಿಸಿದ ಜನರಿಗೆ ಅವರವರ ಕೋರಿಕೆಗಳು ನೆರವೇರುತ್ತಿದ್ದವು. ಅದರಿಂದ ಅವರಿಗೆ ದೇವಿಯಲ್ಲಿ ಇರುವ ವಿಶ್ವಾಸ ಮತ್ತಷ್ಟು ಹೆಚ್ಚಾಯಿತು. ಒಂದುವೇಳೆ ದೇವಿಯ ಮಹಿಮೆಯನ್ನು ಕುರಿತು ಸಂಶಯ ಪಟ್ಟು ಯಾರಾದರೂ ತಮ್ಮಿಷ್ಟ ಬಂದಂತೆ ತೆಗಳಿ ಮಾತನಾಡಿದರೆ ಅಂತಹವರಿಗೆ ಕೂಡಲೇ ಕಷ್ಟ ನಷ್ಟಗಳು ಸಂಭವಿಸುತಿತ್ತು. ಆಗವರು "ತಾಯಿ, ಅಪರಾಧ ಮಾಡಿದೆವು. ಕ್ಷಮಿಸು" ಎಂದು ಕೆನ್ನೆ ಬಡಕೊಳ್ಳಬೇಕಾಗುತಿತ್ತು. ಹೀಗಿರುವಲ್ಲಿ ಒಂದು ದಿನ ಚಿರತೆಯೊಂದು ಆ ಕಡೆ ಸಂಚಾರಕ್ಕೆ ಹೊರಟಿತು. ಆಗಿನ ಕಾಲದಲ್ಲಿ ಚಿರತೆಗೆ ಮೈಮೇಲೆ ಮಚ್ಚೆಗಳು ಇಲ್ಲದೆ ಸಾಫಾಗಿತ್ತು.

ಚಿರತೆ ಸಂಗನೂರಿನ ಮಾರಮ್ಮನ ಗುಡಿ ಸಮೀಪ ಸೇರುವವೇಳೆಗೆ ವಿಜೃಂಭಣೆಯಿಂದ ಗ್ರಾಮದೇವತೆ ಜಾತ್ರೆ ಮುಗಿಸಿಕೊಂಡು ಆಗ ತಾನೇ ಜನ ಹಿಂತಿರುಗುತ್ತಿರುವುದು ಅದಕ್ಕೆ ಕಾಣಿಸಿತು. "ಸರಿ, ಈ ಜನವೆಲ್ಲಾ ಹೊರಟು ಹೋದಮೇಲೆ ನಾನು ಗುಡಿಯೊಳಕ್ಕೇ ಹೋಗುತ್ತೇನೆ. ಅಲ್ಲಿ ಇಂದು ಒಳ್ಳೊಳ್ಳೇ ತಿಂಡಿ ಸಿಗುತ್ತದೆ. ಹೊಟ್ಟೆತುಂಬಾ ಉಣ್ಣಬಹುದು" ಎಂದು ನಾಲಿಗೆ ಚಪ್ಪರಿಸುತಿತ್ತು, ಆ ಚಿರತೆ.

ಅಂದುಕೊಂಡಂತೆಯೇ ಕತ್ತಲಾದಮೇಲೆ ಗುಡಿಯೊಳಕ್ಕೆ ಹೋಯಿತು. "ಏನಮ್ಮಾ, ಮಾರಮ್ಮ, ಮೈಯೆಲ್ಲಾ ಬೊಟ್ಟು, ಸುತ್ತಲೂ ನೂಲು ಎಳೆಕಟ್ಟೊ, ಪಕ್ಕದಲ್ಲಿಮೆಟ್ಟಲು! ಓ, ಅಮ್ಮನೋರು ಅಮ್ಮನೋರೂ ಅಂದರೆ ಈ ಮರವೇಯೋ?" ಎಂದು ಗಹಗಹಿಸಿ ನಕ್ಕಿತು. ನಕ್ಕುನಕ್ಕೂ ಮರದ ಸುತ್ತಲೂ ಪ್ರದಕ್ಷಣೆ

ಮಾಡುತ್ತಾ ಕ್ರಮೇಣ ಅಮ್ಮನವರ ಮುಂದಿದ್ದ ಪ್ರಸಾದಗಳನ್ನೂ ಒಂದೊಂದಾಗಿ ಸ್ವಾಹಾ ಮಾಡಲು ಮೊದಲುಮಾಡಿತು. ಚಿರತೆ ಅಷ್ಟಕ್ಕೇ ಸುಮ್ಮನಿರಲಿಲ್ಲ. "ಭೋ ವಿಚಿತ್ರ ವಾದ ದೇವಿನೀನು! ಚುಕ್ಕೆ ಚುಕ್ಕೆ ಸೀರೆ ಉಟ್ಟಂತೆ ಎಷ್ಟು ಸೊಗುಸಾಗಿದ್ದೀಯೋ!!" ಎಂದು ಅಣಕವಾಡಿತು. ಈ ಮಾತು ಕೇಳಿ ದೇವಿ ಉಗ್ರಳಾದಳು. ಆ ಸೊಕ್ಕಿದ ಚಿರತೆಗೆ ಬುದ್ಧಿ ಹೇಳಬೇಕೆಂದು ನಿಶ್ಚಯಿಸಿದಳಾಕೆ.

ಚಿರತೆ ಹೊಟ್ಟೆ ತುಂಬಾ ಪ್ರಸಾದಗಳನ್ನು ನುಂಗಿ, ಅಡವಿಯೊಳಕ್ಕೆ ಹಿಂತಿರುಗುವಾಗ್ಯೆ ಮಧ್ಯ ದಾರಿಯಲ್ಲಿ ಒಂದು ಅಂದವಾದ ನಾಗರಹಾವು ಅದರಕಡೆ ಬಂತು. ಚಿರತೆ ಸುಮ್ಮನಿರಲಾರದೆ "ಎಲೇ, ಗೆಳೆಯಾ, ನೀನೂ ಮಾರಮ್ಮನ ಹಾಗೆ ಚುಕ್ಕೆ ಚುಕ್ಕೆ ಸೀರೆ ಉಟ್ಟು ಕೊಂಡಿದ್ದೀಯಲ್ಲಾ" ಎಂದು ಪರಿಹಾಸ ಮಾಡಿತು. ಇದನ್ನುಕೇಳಿ ನಾಗರಹಾವು "ನನಗೇ ಅಲ್ಲ, ನಿನಗೂ ಬರುತ್ತೆ ಇರು, ಚುಕ್ಕೆ ಚುಕ್ಕೆ ಸೀರೆ" ಎಂದು ಅದನ್ನು ಕಚ್ಚಿತು. ಕೂಡಲೇ ಬೆಳ್ಳಗೆ ಸಾಫಾಗಿದ್ದ ಚಿರತೆಯ ಮೈಮೇಲೆ ಬೊಕ್ಕೆಗಳು ಎದ್ದವು. ಇದೇನು ವಿಚಿತ್ರ ಅಂತ ನೋಡಿದರೆ ನಾಗರಹಾವು ಮಾಯವಾಗಿ ಅದರ ಸ್ಥಳದಲ್ಲಿ ಮಾರಮ್ಮ ಪ್ರತ್ಯಕ್ಷವಾದಳು.

ಚಿರತೆ ದೇವಿಗೆ ನಮಸ್ಕಾರ ಮಾಡಿ, ಕ್ಷಮಿಸುವಂತೆ ಕೇಳಿಕೊಂಡಿತು. ಆಗ ದೇವಿ ಮರುಕಗೊಂಡು "ಎಲೈ ಸ್ನೇಹಿತನೇ, ಬೇವಿನ ಎಲೆ ರಸ ತೆಗೆದು ಮೈಗೆ ಹಚ್ಚಿಕೋ" ಎಂತ ಹೇಳಿ ಅದೃಶ್ಯಳಾದಳು. ಚಿರತೆ ದೇವಿಹೇಳಿದ ಪ್ರಕಾರ ಮಾಡಲು, ಬೊಕ್ಕೆಗಳು ಮಾಯ ವಾಗಿ ಆ ಸ್ಥಳ ಅಂದವಾದ ಚುಕ್ಕೆಗಳಿಂದ ತುಂಬಿ ಮೆರೆಯುತ್ತಾ ಮೈಯೆಲ್ಲಾ ಹೊಂಬಣ್ಣ ವಾಗಿ ನೋಡಲು ಚಿರತೆ ತುಂಬಾ ಸುಂದರ ವಾಗಿ ಕಾಣಿಸಿತು. ಇದೆಲ್ಲವು ಮಾರಮ್ಮನ ಕೃಪೆ ಎಂದು ಅರಿತು ಚಿರತೆ ತುಂಬಾ ಸಂತೋಷ ಪಟ್ಟಿತು. ಅಂದಿನಿಂದ ಚಿರತೆಯ ಜಾತಿಗೆಲ್ಲಾ ಚುಕ್ಕೆಗಳಿಂದ ಕೂಡಿದ ಹೊಂಬಣ್ಣದ ಶರೀರಬಂತು.



## ಕಳ್ಳರು ಎಲ್ಲಿ?

'ಕಿಟ್ಟ'ನು ಪುಟ್ಟನು ; ಮೊಟ್ಟೆಗಳೈದನು
ಕೋಣೆಯಲಿಟ್ಟನು. ಮಲಗೇ ಬಿಟ್ಟನು.
ಕತ್ತಲೆ ಹೋಯ್ತು, ಬೆಳಗಾಯ್ತು.

ಎದ್ದನು ಕಿಟ್ಟನು, ದಿಟ್ಟಿಯನಿಟ್ಟನು ;
ಮೂರೇ ಮೊಟ್ಟೆಗಳಿದ್ದುವು ಅಷ್ಟೇ!
'ಇನ್ನೆರಡೆಲ್ಲಿ?'—ಕಳುವಾಯ್ತು!

"ಕಳ್ಳನು ಕೆಟ್ಟನು! ಹಿಡಿವೆನು ಜುಟ್ಟನು!
ಕೊಡುವೆನು ಪೆಟ್ಟನು!"—ಎನ್ನುತ ಕಿಟ್ಟನು
ಕತ್ತಲೆ ಬರ್ತಲೆ ಹೊಂಚಿದನು.

ಬಿಲದೊಳಗಿಂದ, ಬಂದವು ಎರಡಿಲಿ!
ಒಂದಿಲಿ ಮುಂದಿಲಿ, ಒಂದಿಲಿ ಹಿಂದಿಲಿ!
ಬಂದವು ಮೊಟ್ಟೆಗಳಿರುವಲ್ಲಿ.

ಒಂದಿಲಿ ಮೊಟ್ಟೆಗೆ ಬಾಲವ ಸುತ್ತಿತು.
ಇನ್ನೊಂದದರಾ ಬಾಲವ ಕಚ್ಚಿತು.
ಹೀಗೆಯೆ ಕಾಲನು ಎಳೆಯುತಎಳೆಯುತ
ನಡೆದುವು ಮೊಟ್ಟೆಯ ನೆಳೆಯುತ್ತ!

"ಸಿಕ್ಕಿದರಲ್ಲಾ ಮೊಟ್ಟೆಯ ಕಳ್ಳರು!"—
ಎನ್ನುತ ಕಿಟ್ಟನು ಹಾರಿಯೆ ಬಿಟ್ಟನು!
ದೊಣ್ಣೆಯನೆತ್ತಿ–'ಡಭಾಲ್' ಕೊಟ್ಟನು!
ಮೊಟ್ಟೆಗೆ ಪೆಟ್ಟು, ಪುಡಿ ಪುಡಿ ಮೊಟ್ಟೆ!
'ಗುಡು ಗುಡು–ಚೀಂವ್ ಚೀಂವ್'

ಇಲಿಗಳುಮಾಯ!
ಕಳ್ಳರು ಎಲ್ಲಿ?— ಕಣ್ಮಾಯ!

—"ನವಗಿರಿನಂದ"

## ಒಗಟಿಂಗಳು

1. ನೀರಿನ ಮೇಲಿಂದ ಏಳು ಕಾಗೆ,
ಮರದಲ್ಲಿ ಹತ್ತು ಕಾಗೆ
ಬಿಸಿಲಲ್ಲಿ ಆರು ಕಾಗೆ
ಎಂದರೆ ಎಷ್ಟು ಕಾಗೆ?
ಎಂದು ಕೇಳುತ್ತಾನೆ ಬಿ. ಯಂ ಧರ್ಮಶಂಕರ.

2. ಎಲುಬಿಲ್ಲದ ಕುದುರೆ ಹತ್ತಿಕೊಂಡು,
ನಾಲಗೆ ಯಿಲ್ಲದ ನಾಯನಿ ಡಿದು,
ಗಿಡವಿಲ್ಲದ ದೇಶಕ್ಕೆಹೋಗಿ,
ತೊಡೆಯಿಲ್ಲದ ಮೃಗವನ್ನು ಹಿಡಿದರಂತೆ
ಇದೇನು? —ಎ. ಚನ್ನಪ್ಪ.

3. ಮರದಲ್ಲಿ ಮರಹುಟ್ಟಿ ಭೂಚಕ್ರಕಾಯಾಗಿ
ತಿನ್ನಬಾರದ ಹಣ್ಣು ಬಲುರುಚೀಬಲುರುಚಿ.

4. ಅಂಕುಡೊಂಕದಭಾವಿ,ಶಂಖಚಕ್ರದ ಭಾವಿ,
ಹಣಿಕೆ ಇಣಿಕಿ ನೋಡಿದರೂ ತುಣುಕು
ನೀರಿಲ್ಲ. —ಎ. ರಾಜಮ್ಮ

5. ಕೈಹಿಡಿದವ ಗಂಡನಲ್ಲ
ಮೊಲೆಹಿಡಿದವ ಮಿಂಡನಲ್ಲ.
—ಪಾ. ವೆ. ಕುಲಕರ್ಣಿ.

6. ಗಾಳಿಯಿಲ್ಲದೇ ಇರುವುದು ಮರವಲ್ಲ
ನೀರಿನಲ್ಲಿಯೂ ಇರುವುದು ಮೊಸಳೆಯಲ್ಲ,
ಸಾಧು ಪ್ರಾಣಿಯದು ಕುರಿಯಲ್ಲ.

7. ಕಚ್ಚಿದರೆ ಕಿಚ್ಚಾಗುವೆ
ಕೊಕ್ಕುಂಟು ಕೂಗಲಾರೆ
ರೆಕ್ಕೆಯುಂಟು ಹಾರಲಾರೆ
ನೆಲದೊಳಗೆ ಹೊಕ್ಕಿದ್ದರೂ ನನ್ನನ್ನೂಬಿಡರು.

8. ಕಲ್ಲು ಕಂದಕ, ಬಿಳಿ ಸಂದುಕ
ನೀರುಂಟು ಮೀನಿಲ್ಲ.

9. ಹಚ್ಚನೆ ಹಕ್ಕಿ ಪುಕ್ಕತರಿದು, ಕಲ್ಲಿನಮೇಲೆ
ಕಾರ ಅರೆದು, ಬಾಯಿಗಿಟ್ಟರೆ ಬಹಳರುಚಿ.

10. ಸಾವಿರ ಮಕ್ಕಳಿಗೆ ಒಂದೇ ಉಡಿದಾರ.

—ಎಂ. ಎಸ್. ನಾಗವೇಣಿ.

## ಹೀಗೆಯೇ ನಡೆ

ಪರರ ನೀನು ಕಾಂಬ ಮುನ್ನ ।
ನಿನ್ನ ನೀನು ನೋಡು ಚೆನ್ನ ।
ಸಿರಿಯು ವನದೊಳಲೆಯುವೆ ।
ಹಿರಿಯ ಸುಖವ ಪಡೆಯುವೆ ॥

ಭೀರುತನವ ಮರೆತು ಬಿಡು ।
ವೀರತನವ ಮೆರೆಯುತಿಡು ।
ಶೂರನಾಗಿ ಬಾಳುವೆ ।
ಸಾರಿ ಸಾರಿ ಪೇಳುವೆ ॥

ಪಟ್ಟಪಾಡ ಬಿಡಲು ಬೇಡ ।
ತೊಟ್ಟ ಈಡ ಮಡಗ ಬೇಡ ।
ಸಿದ್ಧಿಸುವುದು ಕಾರ್ಯವು ।
ವೃದ್ಧಿಸುವುದು ಧೈರ್ಯವು ॥

—ಇನ್ನ. ಹರಿಚಂದ್ರ, ಬೋಳಾರ.

## ಬಂತು

ಬಂತು ಬಂತು, ಹೇಗೆ ಬಂತು?
ಬರೆದು ಬರೆದು ಬರಹ ಬಂತು,
ಓದಿ ಓದಿ ಓದು ಬಂತು, . .
ಆಡಿ ಆಡಿ ಆಟ ಬಂತು, . .
ಬೊಗಳಿ ಬೊಗಳಿ ರಾಗ ಬಂತು,
ಹಾಡಿ ಹಾಡಿ ಹಾಡು ಬಂತು,
ಮಾಡಿ ಮಾಡಿ ಲೆಕ್ಕ ಬಂತು,
ಬಿಡಿಸಿ ಬಿಡಿಸಿ ಚಿತ್ರ ಬಂತು, .
ಹೇಳಿ ಹೇಳಿ ಕಥೆಯು ಬಂತು,
ಕಲಿತು ಕಲಿತು ಎಲ್ಲ ಬಂತು,
ಎಲ್ಲ ಕೂಡಿ ವಿದ್ಯೆ ಬಂತು, . .

—ಎಫ್. ಕೃಷ್ಣ ಭಟ್ಟ, ಮಾದಕಟ್ಟೆ,

## ಸಣ್ಣ ಸಲಹೆ

ಮಕ್ಕಳಿರಾ, ನೀವೆಲ್ಲಾ ಆಟ ಆಡುವಾಗ ಎಷ್ಟೋ ಸಲ ಕಣ್ಣಿಗೆ ಧೂಳು ಮಣ್ಣು ಇತ್ಯಾದಿ ಕಸ ಬಿದ್ದುತೊಂದರೆ ಕೊಡುವುದುಂಟು. ಅಲ್ಲವೆ? ಆ ಕಸತೆಗೆಯಲು ನೀವೆಲ್ಲಾ ಮಾಡುವುದೇ ನೆಂದರೆ ಎರಡು ಕೈಗಳಿಂದಲೂ ಗಟ್ಟಿಯಾಗಿ ಕಣ್ಣನ್ನು ಅದುಮಿ ಉಜ್ಜುವುದೊಂದಷ್ಟೆ! ಹಾಗೂ ಹೋಗದಿದ್ದರೆ ಕಣ್ಣಿನಲ್ಲಿ ನೀರು ಸುರಿಸುತ್ತಾ ತಾಯಿಬಳಿಗೆ ಓಡುವಿರಿ.

ಆದರೆ ನಿಮ್ಮ ಸಹೋದರನೊಬ್ಬನು ಅದಕ್ಕೆ ಒಂದು ಸುಲಭ ಉಪಾಯ ನಿಮ್ಮೆಲ್ಲರ ಪ್ರಯೋಜನಕ್ಕಾಗಿ ಹೇಳುತಾನೆ. ಈಗ, ಬಲಗಣ್ಣಿಗೆ ಕಸಬಿದ್ದಿತೆಂದು ನೆನೆಸಿರಿ, ಅದಕ್ಕೆ ಬಲಗಣ್ಣಿನ ಮೇಲಿನ ರೆಪ್ಪೆಯನ್ನು ಎಳೆದು ಕೆಳಗಿನ ರೆಪ್ಪೆಯ ಮೇಲೆ ಕೂರುವಂತೆ ಇಟ್ಟುಕೊಂಡು ಕಣ್ಣು ಗುಡ್ಡೆಯನ್ನು ತಿರುಗಿಸಿ, ಮೂಗಿನ ಬಲರಂಧ್ರವನ್ನು ಭದ್ರವಾಗಿ ಮುಚ್ಚಿಕೊಂಡು ಜೋರಾಗಿ ಉಸಿರನ್ನು ಬಿಟ್ಟರೆ. ಎಂಥ ಕಸವೂ ಹೊರಗೆ ಬರುವುದೆಂದು ಬೆಂಗಳೂರಿನ ಕೆ. ವಿ. ಕೃಷ್ಣಾಸಾ ಹೇಳುವನು, ಇದನ್ನು ಅವನೂ ಅವನ ಹಿರಿಯರೂ ಅನುಸರಿಸಿ ಗುಣ ಕಂಡಿದ್ದಾರಂತೆ.

ಕಣ್ಣಿಗೆ ಕಸ ಬಿದ್ದಾಗ ನೀವೂ ಹಾಗೆಮಾಡಿ ನೋಡಿ, ಗುಣಕಂಡರೂ ಅಥವಾ ಇಲ್ಲದಿದ್ದರೂ ನನಗೆ ತಿಳಿಸಿರಿ. —ಚಂದಮಾಮ.

### ನಿಮಗಿದು ಗೊತ್ತೆ?

(1) ಮನುಷ್ಯರಿರುವ ಬಾಯಿ ಯಾವುದು?
(2) ಹಾಕಲಾಗದ ಗಾಳ ಯಾವುದು?
(3) ಧರಿಸಲಾರದ ಹಾರ ಯಾವುದು?
(4) ಹೊರಲಾರದ ಕತ್ತೆ ಯಾವುದು?

—ವಿ. ಆನಂದ ರತ್ನ, ಮೇಲುಕೋಟೆ.

# ಮೀಸೆಗೆ ಬಹುಮಾನ

ಚಂದ್ರಾವತಿ ಎಂಬ ಪಟ್ಟಣದ ಅರಸನ ಹೆಸರು ಸೂರ್ಯಸೇನ. ಆ ರಾಜನ ತಾಯಿಗೆ ಯಾವಾಗಲೂ ರೋಗ ಕಾಡುತ್ತಿತ್ತು. ಸಾಯುವ ಮುನ್ನ ತಾಯಿಯು ತನ್ನ ಮಗನನ್ನು ಕರೆದು "ನಾನು ಸತ್ತಮೇಲೆ ನನ್ನಹೆಸರಿನಲ್ಲಿ ಪ್ರಜೆಗಳಿಗೆಲ್ಲ ಊಟ ಮತ್ತು ದಕ್ಷಿಣೆ ಕೊಡಬೇಕು" ಎಂದು ಹೇಳಿ ಪ್ರಾಣ ಬಿಟ್ಟಳು. ರಾಜನು ತಾಯಿಯ ವೈಕುಂಠದ ದಿನಕ್ಕೆ ಪ್ರಜೆಗಳೆಲ್ಲ ಅರಮನೆಗೆ ಊಟ ಮತ್ತು ದಕ್ಷಿಣೆಗಾಗಿ ಬರಬೇಕೆಂದೂ, ಹಾಗೆ ಬರುವವರೆಲ್ಲರೂ ಮೀಸೆಯನ್ನು ಬೋಳಿಸಿ ಕೊಂಡು ಬರಬೇಕೆಂದೂ ಡಂಗೂರ ಸಾರಿಸಿದನು. ರಾಜನು ಹೀಗೆ ಮೀಸೆ ಬೋಳಿಸ ಹೇಳಲು ಒಂದು ಕಾರಣವಿತ್ತು. ರಾಜನ ತಾಯಿಯು ಮೀಸೆ ಕಂಡರೆ ಕೋಪಿಸಿಕೊಳ್ಳುತ್ತಿದ್ದಳು. ಅವಳತೃಪ್ತಿ ಗಾಗಿ ಈ ರೀತಿ ಮಾಡಿದನು.

ಊರಿನಲ್ಲೆಲ್ಲ ಗಡಿಬಿಡಿ. ಕ್ಷೌರಿಕರಿಗಂತೂ ಅಂದು ಬಿಡುವೇ ಇಲ್ಲ. ಅನೇಕರು ಕ್ಷೌರಿಕರಿಗಾಗಿ ಬೇಸತ್ತು ತಮ್ಮ ಮೀಸೆ ಬೋಳಿಸಲಾರದೆ ನಿರಾಸೆಯಿಂದ ಮನೆಯಲ್ಲೇ ಉಳಿಯಬೇಕಾಯಿತು.

ಅದೇ ಊರಿನಲ್ಲಿ ಬಹಳ ಬುದ್ಧಿವಂತನಾದ ಅಪ್ಪಾಶಾಸ್ತ್ರಿ ಎಂಬೊಬ್ಬ ಬಡ ಬ್ರಾಹ್ಮಣ ನಿದ್ದನು. ಅವನಿಗೆ ತನ್ನ ಮೀಸೆಯೆಂದರೆ ಬಹಳ ಅಭಿಮಾನ ಮತ್ತು ಪ್ರೇಮ. ಈಗ ಬೇರೆ ಉಪಾಯವಿಲ್ಲದೆ ಕಡೆಗೆ ತನ್ನ ಬೋರಲು ಮೀಸೆಯನ್ನು ನಯವಾಗಿ ಎಳೆದು ಬಾಚಿಕೊಂಡು ಹಾಗೆಯೇ ಹೊರಟು ಅರ ಮನೆಯಲ್ಲಿ ಊಟಕ್ಕೆ ಒಂದು ಬದಿಯಲ್ಲಿ ಕುಳಿತು ಕೊಂಡನು. ರಾಜ ಮತ್ತು ಮಂತ್ರಿಗಳು ಎಲ್ಲರೂ ಮೀಸೆ ಬೋಳಿಸಿದ್ದಾರೆಯೆ ಎಂದು ನೋಡುತ್ತ ಬರಲು ಅಲ್ಲಿ ದೊಡ್ಡ ಮೀಸೆಗಳೊಡನೆ ಕುಳಿತಿದ್ದ ಅಪ್ಪಾ ಶಾಸ್ತ್ರಿಯನ್ನು ಕಂಡು "ಎಲೈ ಶಾಸ್ತ್ರಿಗಳೇ, ಮೀಸೆ ಬೋಳಿಸಲಿಲ್ಲವೇಕೆ?" ಎಂದು ಕೇಳಿದರು.

ಅದಕ್ಕೆ ಶಾಸ್ತ್ರಿಯು "ನನ್ನ ಕಥೆ ತಮಗೆ ಗೊತ್ತಿಲ್ಲ ಪ್ರಭು. ಈ ಮೀಸೆ ನನ್ನದಲ್ಲ" ಎಂದನು. 'ಇದೇನಯ್ಯಾ ವಿಚಿತ್ರ? ನಿನ್ನ ಮುಖದಲ್ಲಿರುವ ಮೀಸೆ ನಿನ್ನದಲ್ಲದಿದ್ದರೆ ಇನ್ನಾರದಾದೀತು?" ಎಂದು ರಾಜ ಆಶ್ಚರ್ಯದಿಂದ ಕೇಳಲು, ಶಾಸ್ತ್ರಿಯು ಬಹಳ ನಮ್ರನಾಗಿ "ಪ್ರಭೋ, ಇರುವ ಸಮಾ ಚಾರ ಇದು. ನನ್ನ ತಂದೆ ತಾಯಿಗಳು ತುಂಬಾ ಬಡವರು. ಮತ್ತು ನನಗೆ ಎಂಟು ಮಂದಿ ಹೆಣ್ಣು ಮಕ್ಕಳು. ವರದಕ್ಷಿಣೆಯ ಪೀಡೆಯಿಂದ ನನ್ನ ಮಗಳಿಗೆ ಎಲ್ಲಿಯೂ ವರ ಸಿಕ್ಕಲಿಲ್ಲ. ಆದುದರಿಂದ ಹತ್ತಿರದ ರಾಜ್ಯದ ಅರಸರ ಬಳಿಹೋಗಿ ಅವ ರೊಡನೆ ನನ್ನ ಮಗಳ ವದುವೆಗಾಗಿ ಹಣ ಸಹಾಯವನ್ನು ಬೇಡಿದೆ." ಅದಕ್ಕವರು "ಈ ಹಣ ನಿನ್ನ ಮಗಳ ಮದುವೆಗಲ್ಲ. ನೀನು ಬೆಳೆಸಿದ ಮೀಸೆಗೆ" ಎಂದು ಹೇಳಿ ಒಂದು ಸಾವಿರ ವರಹ ಗಳನ್ನು ಕೊಟ್ಟರು. ಅಂದಿನಿಂದ ಈ ಮೀಸೆ ಅವರ ಸ್ವತ್ತಾಯಿತು. ಆದುದರಿದ ಈ ಮೀಸೆ ಯನ್ನು ಬೋಳಿಸಲು ನನಗೆ ಹಕ್ಕಿಲ್ಲ." ಎಂದನು. ಅದಕ್ಕೆ ಸೂರ್ಯಸೇನನು ಕೂಡಲೇ ಒಂದು ಸಾವಿರ

ಪಿ. ಮೋಹನರಾವ್ ; ಉಡಿಪಿ.

ವರಹಗಳನ್ನು ತರಿಸಿ ಕೊಟ್ಟು, "ಎಲೈ ಶಾಸ್ತ್ರೀ, ಈ ಹಣವನ್ನು ಆ ರಾಜನಿಗೆ ಹಿಂದಕ್ಕೆಕೊಟ್ಟು ಮೀಸೆಯನ್ನು ಬೋಳಿಸಿಕೊಂಡು ಜಾಗ್ರತೆ ಬಾ" ಎಂದನು. ಶಾಸ್ತ್ರಿಯು ಆಗಲಿ ಎಂದು ಹೇಳಿ ಆ ಹಣವನ್ನು ಮನೆಯಲ್ಲಿಟ್ಟು ಸ್ವಲ್ಪ ಹೊತ್ತು ವಿಶ್ರಮಿಸಿ ಪುನಃ ಮೀಸೆಯೊಂದಿಗೇ ಅರಮನೆಗೆ ಹೋದನು.

ರಾಜನು ಆತನನ್ನು ಕಂಡಕೂಡಲೇ "ಇನ್ನೂ ಯಾಕೆ ಮೀಸೆಯನ್ನುಬೋಳಿಸಲಿಲ್ಲ?" ಎಂದು ಕೇಳಿದನು. ಅದಕ್ಕೆ ಶಾಸ್ತ್ರಿಯು "ಪ್ರಭೋ, ಈ ಮೀಸೆಯು ಇದುವರೆಗೆ ಆ ರಾಜನದಾಗಿದ್ದುದು ಹಣ ಹಿಂತಿರುಗಿಸಿದೊಡನೆ ತಮ್ಮ ಸ್ವತ್ತಾಯಿತು. ಆದುದರಿಂದ ನಾನು ಹೇಗೆ ಬೋಳಿಸಿಕೊಳ್ಳಲಿ?" ಎಂದನು. ಅದಕ್ಕೆ ರಾಜನು ಶಾಸ್ತ್ರಿಯ ಮಾತಿಗೆ ನಕ್ಕು ಅವನ ಮೀಸೆಯಿದ್ದಂತೆಯೇ ಎಲ್ಲರಿಗೂ ಭೋಜನವಿಟ್ಟು 4-4 ವರಹ ದಕ್ಷಿಣೆ ಇತ್ತನು. ಮತ್ತು ಉಳಿದ ಹಣವನ್ನೆಲ್ಲ ಅಪ್ಪಾ ಶಾಸ್ತ್ರಿಗೆ ಕೊಟ್ಟನು.

## ಚುಟಕ

ನಮ್ಮ ಊರು ಶಿದ್ದ
ಕಬ್ಬಿನೊಂದ ಕದ್ದ
ಹೊಲದೊಳಿದ್ದ
ಆಳು ಬಂದು
ಹೊಡೆದನೊಂದು ಗುದ್ದ

ಪೋಲಿ ಜನರ ಕೂಡಿ
ಕಳ್ಳತನವ ಮಾಡಿ
ಶಿದ್ದನಾದ
ಭಾರಿ 'ಕೇಡಿ'
ಅದುವೆ ಹೆಸರು ರೂಢಿ

—ಬಿ. ರಾಮಚಂದ್ರ ಭಟ್ಟ

## ನಗೆ—ಹನಿ

ಗುರು—ಬಾಬರನು ಪಟ್ಟಕ್ಕೆ ಬಂದಾಗ ಏನು ಮಾಡಿದ?

ಶಿಷ್ಯ—ಮತ್ತೇನುಮಾಡುತ್ತಾನೆ! ಸಿಂಹಾಸನದಲ್ಲಿ ಕುಳಿತುಕೊಂಡ, ಸಾರ್.

* * *

ಗುರು—ಲೋ, ಮೋಹನ, ನೀನು ಸರಿಯಾಗಿ ಓದುವುದಿಲ್ಲ. ನಿಮ್ಮ ಮನೆಗೆ ಬಂದು ತಂದೆಯಕೂಡ ಹೇಳುತ್ತೇನೆ.

ಶಿಷ್ಯ—ಸಾರ್, ಆದರೆ ನಮ್ಮ ತಂದೆ ಒಂದು ಸಲದ ಭೇಟಿಗೆ 5 ರೂಪಾಯಿ ಚಾರ್ಜು ಮಾಡುತ್ತಾರೆ ಸಾರ್. ಅವರು ದೊಡ್ಡ ಡಾಕ್ಟರು. ಎಚ್ಚರಿಕೆ ಕೊಟ್ಟಿದ್ದೇನೆ.

—ಕೆ. ಆರ್. ಶಾನಭಾಗ.

ಆತ— (ಸಾಲಕೊಂಡವನೊಡನೆ) ಏನ್ರಿ, ಈವತ್ತುಕೂಡಾ ರೂಪಾಯಿ ತರಲಿಲ್ಲ?

ಈತ—ಇಂದು ತರಲಿಲ್ಲ. ನಾಡಿದ್ದು ಕಂಡಿತ ತರುವೆ.

ಆತ—ಮೊನ್ನೆಯೂ ನೀವು 'ನಾಡಿದ್ದು ಖಂಡಿತ ತರುವೆ' ಎಂದು ಹೇಳಿದ್ದಿರಿ. ನೆನಪಿದೆಯೆ?

ಈತ—ಹೌದು. ನಾನು ಒಮ್ಮೆ ಹೇಳಿದ ಮಾತನ್ನು ಎಂದಿಗೂ ಬದಲಿಸುವುದಿಲ್ಲ.

—ಬಿ. ಸುಬ್ರಾಯ ಅಡಿಗ.

ಉತ್ತರ—'ನಿಮಗಿದು ಗೊತ್ತೆ'

1) ಬೊಂಬಾಯಿ. 3) ಬಿಹಾರ.
2) ಬಂಗಾಳ. 4) ಕಲಕತ್ತೆ.

ಒಗಟುಗಳ ಉತ್ತರ

1. ಒಂದೇ ಕಾಗೆ. 2. ಜೋಡು, ಬಲೆ, ಕೆರೆ, ಮೀನು. 3. ಮಗು. 4. ಕಿವಿ. 5. ಬಳೆಗಾರ, ಹಸಗೂಸು. 6. ಆಮೆ. 7. ಹಸಿಶುಂಠಿ. 8. ತೆಂಗಿನಕಾಯಿ. 9. ಕೊತ್ತುಂಬರಿ ಸೊಪ್ಪು, 10. ಕಸಪೊರಕೆ.

# ಗಾದೆಗಳು — ಸ್ತ್ರೀ (ಮುಂದುವರಿದುದು)

57. ಬೆಂಕಿಯಿಲ್ಲದೆ ಹೊಗೆಯಿಲ್ಲ; ಛಿದ್ರವಿಲ್ಲದೆ ಸಂಸಾರವಿಲ್ಲ.
58. ಸ್ತ್ರೀ ಸ್ವತಂತ್ರಳಾದರೆ ಪುರುಷ ಪರತಂತ್ರ (ಸ್ತ್ರೀತಂತ್ರ)
59. ಅತ್ತೆಯ ತುರುಬನ್ನು ಮಾವನಿಗೆ ದಾನ ಮಾಡಿದಂತೆ.
60. ಮಾಡುವುದು ಅನಾಚಾರ; ಮನೆಮುಂದೆ ಬೃಂದಾವನ.
61. ಆಡುವ ಮಗುವನ್ನು ಕಾಡುವ ಮಗುವಿಗೆ ಕೊಟ್ಟಂತೆ.
62. ಉಂಡಮ್ಮ ಹರಸಬೇಡ; ನೊಂದಮ್ಮ ಶಪಿಸಬೇಡ.
63. ಅಜ್ಜಿ ಇಲ್ಲದ ಮನೆ, ಮಜ್ಜಿಗೆಇಲ್ಲದ ಊಟ ಒಂದೇ.
64. ಕೂಸು ಹುಟ್ಟುವಮೊದಲೇ ಕುಲಾವಿ ಹೊಲೆಸಿದರು.
65. ಅಂಗಾಲಿಗೆ ಹೇಸಿಕೆಯಿಲ್ಲ. ಕರುಳಿಗೆ ನಾಚಿಕೆ ಇಲ್ಲ.
66. ಆರು ಹೆತ್ತವಳಿಗೆ ಮೂರು ಹೆತ್ತವಳು ಕಲಿಸಿದಂತೆ.
67. ನೀರು ಹೊರುವ ಬಡ್ಡಿಗೆ ಊರ ಪಾರಪತ್ಯವೇಕೆ?
68. ದೀಪಕಂಡು ಮೋಹಿಸಿ ಪತಂಗ ಬಂದು ಬಿದ್ದಂತೆ.
69. ಅಮ್ಮನವರು ಹೆತ್ತಾಗ ಅಯ್ಯನವರಿಗೆ ಕೈಲಾಸ.
70. ಎತ್ತು ಏರಿಗೆಳೆಯಿತು, ಕೋಣ ನೀರಿಗೆಳೆಯಿತು.
71. ಮಡದಿಯೊಡನೆ ಗುಟ್ಟು ಮನೆ ಮನೆಗೂ ರಟ್ಟು.
72. ಆಸೆ ಅರುವತ್ತು ದಿನ, ಮೋಹ ಮುವ್ವತ್ತು ದಿನ.
73. ಅಜ್ಜಿ ನೂತಿದ್ದೆಲ್ಲಾ ಮೊಮ್ಮಗನ ಉಡಿದಾರಕ್ಕೆ.
74. ಹಗಲು ಹೆಂಡಿರ ಕಾಟ; ಇರುಳು ತಿಗಣೆಕಾಟ.
75. ಗಂಡ ಸತ್ತಮೇಲೆ ಹೆಂಡತಿಗೆ ಬುದ್ಧಿ ಬಂದಂತೆ.
76. ಕುಣಿಯಲಾರದ ಸೂಳೆ ನೆಲ ಡೊಂಕೆಂದಳು.
77. ತಾಯಿಯಂತೆ ಮಗಳು, ನೂಲಿನಂತೆ ಸೀರೆ.
78. ದೂರದ ಹೆಣ್ಣಿಗಿಂತ ಹತ್ತಿರದ ಮಿಡಿಲೇಸು.
79. ಅಣ್ಣನಮ್ಮನನಾದರೂ ಅತ್ತಿಗೆನಮ್ಮವಳೇ?
80. ತೋಟ ಸಿಂಗಾರ; ಒಳಗೆ ಗೋಳಿಸೊಪ್ಪು.
81. ಹೊಟ್ಟೆಗೆ ಹಿಟ್ಟಿಲ್ಲ, ಜುಟ್ಟಿಗೆ ಮಲ್ಲಿಗೆ ಹೂ.
82. ಮುದುಕಿಯ ಕೂಳಿಗೆ ಮುನ್ನೂರು ವಿಘ್ನ.
83. ರಾಮನಂತಹ ಪತಿಗೆ ಸೀತೆಯಂತಹಸತಿ.
84. ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ?
85. ಕೊರವಂಜಿ ತಾಯಿ; ಅಪರಂಜಿ ಮಗಳು.
86. ಮನಸ್ಸಿಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು.
87. ಗಂಡನಿಗಿಂತ ಹಿರಿ ಹೆಂಡತಿ ಮಂಡೋದರಿ.
88. ವಿಧವೆಗೆ ವಿಧುರ ಗಂಟು.
89. ತಾಯಿಕಂಡರೆ ತಲೆಬೇನೆ.
90. ನಾರಿಕೆಟ್ಟರೆ ಊರಿಗೆ ಮಾರಿ.
91. ಎಲ್ಲರ ಮನೆ ದೋಸೆ ತೂತು.
92. ಸತಿಗೆ ಪಾತಿವ್ರತ್ಯವೇ ಸ್ವರ್ಗ.
93. ಬಿಸಿಯಾಗದೆ ಬೆಣ್ಣೆ ಕರಗದು.
94. ಕುಲಕೆಟ್ಟರೂ ಶೀಲಕೆಡಬೇಡ.
95. ಹೆಂಡತಿಯನ್ನು ಅತ್ತೆಯಿಂದತಿಳಿ.
96. ವಿಪತ್ತಿನಲ್ಲಿ ಆಪ್ತನನ್ನು ಕಂಡಂತೆ.
97. ದಾರಿಯ ಮಾರಿ ಮನೆಗೆ ಕರೆದಂತೆ.
98. ಗಂಡ ಬಿಟ್ಟರೆ ಮಿಂಡ ಬಿಟ್ಟಾನೇ?
99. ಹಾಸಿಗೆ ಇದ್ದಷ್ಟು ಕಾಲು ಚಾಚು.
100. ಕಬ್ಬು ಡೊಂಕಾದರೆ ಸವಿ ಡೊಂಕೆ?
1. ಕುಲಕ್ಕೆ ಮೃತ್ಯು ಕೊಡಲೀ ಕಾವು.
2. ನಾಯಿಗೂ ಆನೆಗೂ ಬಾಂಧವ್ಯವೇ?
3. ಹೊರಸು ಕಂಡಲ್ಲಿ ಬಸರು ಎಂಬಂತೆ.
4. ಹುಣಿಸೆ ಮುಪ್ಪಾದರೆ ಹುಳಿಮುಪ್ಪೆ?
5. ಮಮತೆಯಿಂದ ಕೊಟ್ಟುದು ಅಮೃತ.
6. ತುಪ್ಪದ ಆಸೆಗೆ ಎಂಜಲು ತಿಂದರಂತೆ.
7. ಮಕ್ಕಳಿಲ್ಲದ ಬಾಳು ಮಸಣಕ್ಕೆಸಮ.
8. ಸೂಳೆ ಕೈಲಿ ಜೋಳ ಕುಟ್ಟಿಸಿದಹಾಗೆ.
9. ಓದಿಲ್ಲ, ಬರಹವಿಲ್ಲ, ವರ ಬುದ್ಧಿವಂತ.
10. ಭೋಗ ಅತಿಯಾದರೆ, ರೋಗವೇಗತಿ.
11. ಗಂಡನನ್ನು ಸೇರಿದ್ದಕ್ಕೆ ಮಗುವೇ ಸಾಕ್ಷಿ.
12. ಬೀಸುವ ಮುದುಕಿಗೆ ಮುಕ್ಕಿದ್ದೇ ಲಾಭ.




## ಪ್ರೇಕ್ಷಕರು ಆರಿಸಿದ ಇಸ್ಪೇಟು ಎಲೆ ಹೇಳುವುದು

**ಈ** ಯುಕ್ತಿ ತುಂಬಾ ಸುಲಭ. ಇದನ್ನು ಮಾಡಲು ಮುಂಚಿತವಾಗಿ ಶ್ರಮಪಟ್ಟು ತಯಾರಿಸಬೇಕಾದ ವಸ್ತುಗಳು ಸಹ ಏನೂ ಇಲ್ಲ.

ಇಸ್ಪೀಟು ಪ್ಯಾಕಿನಿಂದ ಎಲ್ಲ ಎಲೆಗಳನ್ನು ಒಟ್ಟಾಗಿ ತೆಗೆದು ಪ್ರೇಕ್ಷಕರಿಗೆ ಕೊಡು. ಬರಿ ಪೆಟ್ಟಿಗೆಯನ್ನು ನಿನ್ನ ಕೈಯಲ್ಲೆ ಇಟ್ಟುಕೊಂಡು, ಆ ಕೈಯನ್ನು ನಿನ್ನ ಹಿಂಭಾಗದಲ್ಲಿ ಹಿಡಿದುಕೊಂಡು ನಿನ್ನ ಬೆನ್ನು ಪ್ರೇಕ್ಷಕರ ಕಡೆ ತಿರುಗಿಸಿ ನಿಲ್ಲು. ನಂತರ ಪ್ರೇಕ್ಷಕರ ಹತ್ತಿರವಿರುವ ಎಲೆಗಳಲ್ಲಿ ಅವರಿಷ್ಟ ಬಂದ ಎಲೆಯನ್ನು (ಅಂಕಿಗಳು ಮೇಲೆ ಕಾಣಿಸುವಂತಿರಬೇಕು) ಪ್ಯಾಕಿನಲ್ಲಿಟ್ಟು ಮುಚ್ಚುವಂತೆ ಹೇಳು. ಆಗ ಪ್ರೇಕ್ಷಕರ ಕಡೆ ತಿರುಗಿ ಪ್ಯಾಕಿನಲ್ಲಿ ಅವರು ಇಟ್ಟ ಎಲೆ ಯಾವುದೋ ಹೇಳಿಬಿಡಬಹುದು. ಇದರ ರಹಸ್ಯ ವಿಷ್ಟೆ.

ಇಸ್ಪೀಟು ಪ್ಯಾಕನ್ನು ನಿನ್ನ ಮನೆಯಿಂದಲೇ ತಂದುಕೊಳ್ಳಬೇಕು. ಪ್ಯಾಕಿನ ಒಂದು ಕಡೆ ಕೆಳಭಾಗದ ಮೂಲೆಯಲ್ಲಿ ಅರ್ಧ ಅಂಗುಲಗಲ, ಮುಕ್ಕಾಲು ಅಂಗುಲ ಉದ್ದವಿರುವ ರಂಧ್ರಮಾಡು. ಹೀಗೆ ಸಿದ್ಧ ಮಾಡಿಸಿದ್ದ ಪ್ಯಾಕಿನಲ್ಲಿ ಇಸ್ಪೇಟು ಎಲೆಗಳನ್ನು ಇಟ್ಟುಕೊಂಡು ಸಭೆಗೆ ಬರಬೇಕು.



ತರುವಾಯ ನೀನು ಪ್ರೇಕ್ಷಕರ ಮುಂದೆ ನಿಂತಿರುವ ಸಮಯದಲ್ಲಿ ಪ್ಯಾಕಿಗೆಇದ್ದ ರಂಧ್ರವನ್ನು ನಿನ್ನ ಕೈಯಿಂದ ಮುಚ್ಚಿಟ್ಟುಕೊಳ್ಳುವುದು ಅವಶ್ಯಕ. ಹಿಂದಕ್ಕೆ ತಿರುಗಿ ನಿಂತಿರುವಾಗ ರಂಧ್ರವಿರುವ ಭಾಗ ಮೇಲೆ ಇರುವಂತೆ ಕೈಯಲ್ಲಿ ಹಿಡಿದಿರಬೇಕು. ಪ್ರೇಕ್ಷಕನು

ಆರಿಸಿದ ಎಲೆಯಾವುದೋ ನೀನು ರಂಧ್ರದ ಮೂಲಕ ತಿಳಿದಕೊಳ್ಳಬಹುದು.

ಪ್ಯಾಕನ್ನು ಕೈಯಲ್ಲಿ ಹಿಡಿದು, ಬೆನ್ನನ್ನು ಪ್ರೇಕ್ಷಕರಕಡೆ ಮಾಡಿ ನಿಂತಿರುವಾಗ, ಪ್ಯಾಕನ್ನು ಯಾವರೀತಿ ಹಿಡಿದಿರಬೇಕೆಂಬುದನ್ನು ಮೊದಲನೇ ಚಿತ್ರದಲ್ಲಿ ನೋಡು. ಪ್ಯಾಕಿಗೆ ರಂಧ್ರ ಯಾವರೀತಿ ಮಾಡಿರಬೇಕೆಂಬುದು




ಎರಡನೇ ಚಿತ್ರದಲ್ಲಿದೆ ನೋಡಿ ತಿಳಿದುಕೋ.

(ಪಾಠಕರು ಈ ಗಾರುಡಿಯನ್ನು ಕುರಿತು ಸಲಹೆ ಪಡೆಯಬೇಕೆಂದರೆ ಅವರು 'ಚಂದಮಾಮ' ನ ಹೆಸರು ಸೂಚಿಸಿ ಪ್ರೊಫೆಸರಿಗೆ ಇಂಗ್ಲೀಷಿನಲ್ಲಿ ಪತ್ರ ಬರೆಯಬೇಕು. ಅವರ ವಿಳಾಸ:
ಪ್ರೊಫೆಸರ್. ಪಿ. ಸಿ. ಸರ್ಕಾರ್ ಮೆಜಿಷಿಯನ್,
ಪೋಸ್ಟ್‌ಬಾಕ್ಸ್ 7878. ಕಲಕತ್ತಾ 12)

## ಉಡಾಳ ಮೂರ್ತಿ

ವಿ. ಕೆ. ಜೋಶಿ.



ಮೂರ್ತಿಯುಡಾಳನು
ಚಿಕ್ಕವನು
ಜಗಳವನಾಡಲು
ತಕ್ಕವನು
ತಂಗಿಯ ಹೊಡೆದು
ಅಳಿಸುವನು
ಶಾಲೆಯ ಬಿಟ್ಟು
ತಿರುಗುವನು
ಮೂಸ್ತರೆದುರಿಗೆ
ಇಲಿಯುವನು
ಬಾಲಕ ರೆದುರು
ಹುಲಿಯುವನು
ಆಡುತ ಆಡುತ
ದಿನವೆಲ್ಲಾ
ಓದಿಗೆ ಸಮಯವು
ಸಿಗಲಿಲ್ಲಾ
ತೇರ್ಗಡೆ ಹೊಂದಿದ
ಬಾಲಕರು
ನಗುತಲಿರುವರು
ಮನೆಯಲ್ಲಿ
ತೇರ್ಗಡೆ ಹೊಂದದ
ಮೂರ್ತಿಯಲ್ಲಿ
ಅಳುತಲಿರುವನು
ನೋಡಲ್ಲಿ.




ಈ ಚಿತ್ರದಲ್ಲಿ ಎಲ್ಲೆಲ್ಲಿ ಯಾವ ಬಣ್ಣಗಳನ್ನು ಹಾಕಬೇಕೋ ನೋಡಿ ಹಾಕಿರಿ. ಮುಂದಿನ ತಿಂಗಳ ಚಂದಮಾಮದಲ್ಲಿ ನಾವು ಹಾಕುವ ಅದೇ ಬಣ್ಣದ ಚಿತ್ರದೊಂದಿಗೆ ಹೋಲಿಸಿ ನೋಡಿ.



Chandamama, January '51

Photo by R. Krishnan

ಸ್ನಾನ ಮಾಡುವುದು ಹೀಗೆ!

